



ಕನ್ನಡ ವಿಶ್ವವಿದ್ಯಾಲಯ
ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ


ನಿಬಂಧಕಾರರು

**ಯೋಗೀಶಕುಮಾರ ಎಚ್.ಎಸ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎ.ಆರ್.ಮದನಕುಮಾರ್**

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ







ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧



ಕನ್ನಡ ವಿಶ್ವವಿದ್ಯಾಲಯ

ಹಂಪಿ

೨೦೧೦-೧೧ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ

ನಿಬಂಧಕಾರರು

**ಯೋಗೀಶಕುಮಾರ ಎಚ್.ಎಸ್.**

ಕನ್ನಡ ಎಂ.ಫಿಲ್. ವಿದ್ಯಾರ್ಥಿ (ಹಂಪಿ, ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು



ಮಾರ್ಗದರ್ಶಕರು

**ಡಾ. ಎ.ಆರ್.ಮದನಕುಮಾರ್**

ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

೨೦೧೦-೧೧

# ದೃಢೀಕರಣ ಪತ್ರ

೨೦೧೦-೧೧ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS-00485**ರ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ ಯೋಗೀಶಕುಮಾರ ಎಚ್.ಎಸ್. ಅವರು ನನ್ನ ಮಾರ್ಗದರ್ಶನದಲ್ಲಿ **"ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಮೈಸೂರು**
೧೦-೦೬-೨೦೧೧

**(ಡಾ. ಎ.ಆರ್. ಮದನಕುಮಾರ್)**
ಸಹಪ್ರಾಧ್ಯಾಪಕರು,
ಕನ್ನಡ ವಿಭಾಗ
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

# ಅಭ್ಯರ್ಥಿಯ ಘೋಷಣಾ ಪತ್ರ

**"ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ೨೦೧೦-೧೧ನೇ ಸಾಲಿನ ಕನ್ನಡ ಎಂ.ಫಿಲ್. ಪದವಿಯ ಪರೀಕ್ಷೆಗಾಗಿ ಕ್ರಮಸಂಖ್ಯೆ **KVTMKS-00485**ರ ವಿದ್ಯಾರ್ಥಿಯಾದ ನಾನು ಡಾ. ಎ.ಆರ್. ಮದನ ಕುಮಾರ್, ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ ಅವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಯೋಗೀಶಕುಮಾರ ಹೆಚ್.ಎಸ್.

**ಮೈಸೂರು**
ದಿನಾಂಕ: ೧೦-೦೬-೨೦೧೧

**(ಯೋಗೀಶಕುಮಾರ ಎಚ್.ಎಸ್.)**
೨೦೧೦-೧೧ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ

## ಪರಿವಿಡಿ



*****

# ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ನಾಟಕ ಪ್ರಕಾರಕ್ಕೆ ಒಂದು ವಿಶೇಷವಾದ ಸ್ಥಾನವಿದೆ. ಇದು ಭಾಷೆ, ಪಾತ್ರ, ವಸ್ತು, ಸಾಹಿತ್ಯ, ಅಭಿವ್ಯಕ್ತಿ, ನಿರ್ವಹಣೆ ದೃಷ್ಟಿಯಿಂದ ಕನ್ನಡ ಸಾಹಿತ್ಯಕ್ಕೆ ಮುಕುಟಪ್ರಾಯವಾಗಿದೆ. ಸಾಹಿತ್ಯ ನಿಂತ ನೀರಲ್ಲ. ಅದು ಹರಿಯುವ ಗಂಗೆಯಂತೆ ಕ್ರಿಸ್ತಪೂರ್ವದಿಂದ ಇಂದಿನವರೆಗೂ ಒಂದಲ್ಲಾ ಒಂದು ರೀತಿಯಲ್ಲಿ ಕವಲುಗಳಾಗಿ ತಲೆಮಾರಿನಿಂದ ತಲೆಮಾರಿಗೆ ನಿರಂತರವಾಗಿ ಮೌಖಿಕ-ವಾಗಿರಬಹುದು ಅಥವಾ ಲಿಖಿತವಾಗಿರಬಹುದು ಹರಿಯುತ್ತಾ ಬಂದಿದೆ. ಇದು ಸಾಹಿತ್ಯದ ವಿವಿಧ ರೂಪಗಳಾದ ಕೆತ್ತನೆಗಳು, ಬರಹಗಳು, ನಾಟ್ಯಗಳು, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಸಂಗೀತ, ಆತ್ಮಕಥೆಗಳು ಮುಂತಾದ ಪ್ರಕಾರಗಳಲ್ಲಿ ಕವಲು ದಾರಿಗಳಲ್ಲಿ ಸಾಗುತ್ತಾ ಬಂದಿದೆ.

ಭಾರತವು ಹಿಂದೂ ರಾಷ್ಟ್ರವಾಗಿದ್ದು, ಭಾರತೀಯರಾದ ನಮಗೆ ರಾಮಾಯಣ ಮತ್ತು ಮಹಾಭಾರತಗಳೇ ನಮ್ಮ ಸಂಸ್ಕೃತಿಯನ್ನು ಬಿಂಬಿಸುವಂತಹ ಮಹಾಕಾವ್ಯ-ಗಳಾಗಿವೆ. ಇಲ್ಲಿ ಬರುವ ಶ್ರೀರಾಮ, ಲಕ್ಷ್ಮಣ, ಸೀತೆ, ಹನುಮಂತ, ಧರ್ಮರಾಯ, ಶ್ರೀಕೃಷ್ಣ, ಅರ್ಜುನ, ಭೀಮ, ದ್ರೌಪದಿ...... ಮುಂತಾದವರು ನಮ್ಮ ಸಮಾಜಕ್ಕೆ ಆದರ್ಶಪ್ರಾಯರಾಗಿದ್ದಾರೆ. ಇವರುಗಳು ತಮ್ಮದೇ ಆದ ಚಾರಿತ್ರಿಕ ಹಿನ್ನೆಲೆ, ಪ್ರಭಾವ, ಮಹತ್ವವನ್ನು ಪಡೆದುಕೊಂಡಿದ್ದಾರೆ. ಹೀಗಾಗಿ ಪ್ರಾಚೀನ ಕಾಲದಿಂದಲೂ ನಮ್ಮ ಜನರು ಪುರಾಣ ಪ್ರಸಿದ್ಧರಾದಂತಹ ಐತಿಹಾಸಿಕ ವ್ಯಕ್ತಿಗಳ ಆದರ್ಶಕ್ಕೆ ಒಳಗಾಗಿದ್ದು ಅವರೇ ನಮ್ಮ ಜನಸಾಮಾನ್ಯರ ಜೀವನದ ಆದರ್ಶನಾಯಕರಾಗಿದ್ದಾರೆ. ಇದು ಕೇವಲ ಜನಸಾಮಾನ್ಯರಿಗಷ್ಟೇ ಸೀಮಿತವಾಗಿರದೆ ಕನ್ನಡದ ಮಹಾಕವಿಗಳಾದ ಪಂಪ, ರನ್ನ, ಪೊನ್ನ, ಲಕ್ಷ್ಮೀಶ, ರಾಘವಾಂಕ, ಕುಮಾರವ್ಯಾಸ, ಹರಿಹರ, ಮುದ್ದಣ್ಣ ಮುಂತಾದ ಹಳೆಗನ್ನಡ ಕವಿಗಳಿಂದ ಹಿಡಿದು ಇಂದಿನ ಹೊಸಗನ್ನಡ ಸಾಹಿತಿಗಳಾದ ಗೋವಿಂದಪೈ, ದ.ರಾ.ಬೇಂದ್ರೆ, ಮಾಸ್ತಿ, ಕಾರಂತರು, ಕುವೆಂಪು, ಗಿರೀಶಕಾರ್ನಾಡ್, ಭೈರಪ್ಪ, ಜಿ.ಎಸ್.ಶಿವರುದ್ರಪ್ಪ ಮುಂತಾದವರವರೆಗೂ ವ್ಯಾಪಿಸಿದೆ. ಇದರ ಫಲವಾಗಿ ಇವರು ತಮ್ಮ ಸಾಹಿತ್ಯದಲ್ಲಿ ಪುರಾತನ ಪಾತ್ರಗಳನ್ನು ಸನ್ನಿವೇಶ, ಸಂದರ್ಭ, ಪ್ರಸಂಗಗಳ ಒಂದೊಂದು ಮುಖಗಳನ್ನು ತಮ್ಮದೇ ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಿದ್ದಾರೆ.ಆದಿ ಕವಿ ಪಂಪನು ತನ್ನ ಕೃತಿಯಾದ ಪಂಪಭಾರತದಲ್ಲಿ ಅರ್ಜುನನನ್ನು ನಾಯಕನನ್ನಾಗಿ ಮಾಡಿಕೊಂಡರೂ ಕರ್ಣನ ಪಾತ್ರದಿಂದಾಗಿ ಆಕರ್ಷಿತನಾಗಿ ಆ ಪಾತ್ರದ ಸಂಕೀರ್ಣತೆಗೆ ಬೆರಗಾಗಿ ಸೋತಿದ್ದಾನೆ. (ನರಹಳ್ಳಿ ಬಾಲಸುಬ್ರಹ್ಮಣ್ಯ, ಪುಸ್ತಿ ಹೆಸರು-ಕುವೆಂಪು ನಾಟಕ

ಅಧ್ಯಯನ, ಅಂಕಿತ ಪುಸ್ತಕ ಪ್ರಕಾಶನ, ೨೦೦೭, ಪುಟ.೧೨೮) ಹೀಗೆ ಹಳೆಗನ್ನಡ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ಬರಹಗಾರರ ವೈವಿಧ್ಯಮಯವಾದ ಆಲೋಚನೆಗಳು ಬರಹ ರೂಪದಲ್ಲಿ ಭಟ್ಟಿ ಇಳಿಯುವಾಗ ಭಿನ್ನ ಭಿನ್ನ ನೆಲೆಯನ್ನು ಪಡೆದುಕೊಂಡವು.

ನಮ್ಮ ಪುರಾಣಪಾತ್ರಗಳನ್ನು ಪುರಾಣದ ಖಂಡಗಳು, ಪರ್ವಗಳು, ಪ್ರಸಂಗ ಮತ್ತು ಉಪಪ್ರಸಂಗಗಳನ್ನು ತೆಗೆದುಕೊಂಡ ಸಾಹಿತಿಗಳು ವಿವಿಧ ಬಗೆಯ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಕೆಲವರು ಮೂಲ ಪುರಾಣ ವಸ್ತುಗಳನ್ನು ಯಥಾವತ್ತಾಗಿ ಚಿತ್ರಿಸಿದರೆ, ಹಲವರು ತಮ್ಮ ಆಶ್ರಯವಿದ್ದ ರಾಜನನ್ನೋ, ದೇವರನ್ನೋ, ಸಾಮಾನ್ಯ ವ್ಯಕ್ತಿಯನ್ನೋ ಪುರಾಣ ವಸ್ತು, ಪಾತ್ರ ಪ್ರಸಂಗಕ್ಕೆ ಸಮೀಕರಿಸುತ್ತಾ ಬರೆದಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಪಂಪನು ತನ್ನ ಪಂಪ ಭಾರತದಲ್ಲಿ ತನಗೆ ಆಶ್ರಯವಿತ್ತ ಅರಿಕೇಸರಿಯನ್ನು ಅರ್ಜುನನೊಂದಿಗೆ ಸಮೀಕರಿಸಿ ಬರೆದಿದ್ದಾನೆ. ಹೀಗೆ ಮಹಾಕಾವ್ಯ-ಗಳಾದ ರಾಮಾಯಣ ಮತ್ತು ಮಹಾಭಾರತಗಳಿಗೂ ನಮ್ಮ ಸಾಹಿತ್ಯಕ್ಕೂ ಹಿಂದಿ-ನಿಂದಲೂ ಅವಿನಾಭಾವ ಸಂಬಂಧವಿದು ಅದು ನಿರಂತರವಾಗಿ ಹರಿದುಕೊಂಡು ಒಂದೇ ಎತ್ತಿನ ಬಂಡಿಯಂತೆ ಜೊತೆ ಜೊತೆಯಾಗಿ ಜೀವನದಿಯಂತೆ ನಿರಂತರವಾಗಿ ಹಳೆಗನ್ನಡ ಸಾಹಿತ್ಯದಿಂದ ಹೊಸಗನ್ನಡ ಸಾಹಿತ್ಯದವರೆಗೂ ಪರಂಪರಾಗತವಾಗಿ ಬಂದಿದೆ.

ಹೊಸಗನ್ನಡ ಸಾಹಿತಿಗಳು, ಬರಹಗಾರರು, ನಾಟಕಕಾರರು ಕವಿಗಳು, ಕಥೆಗಾರರು ತಮ್ಮ ಸಾಹಿತ್ಯದಲ್ಲಿ ಬಹುತೇಕವಾಗಿ ನಮ್ಮ ಪುರಾಣ ಗ್ರಂಥಗಳನ್ನು ರಾಮಾಯಣ ಮತ್ತು ಮಹಾಭಾರತದಂತಹ ಮಹಾಕಾವ್ಯಗಳಲ್ಲಿನ ವಸ್ತುಗಳನ್ನು ತೆಗೆದುಕೊಂಡು ತಮ್ಮ ಸಾಹಿತ್ಯಕ ಪ್ರತಿಭೆಯನ್ನು ಪ್ರದರ್ಶಿಸುತ್ತಾ ವಿವಿಧ ದೃಷ್ಟಿಕೋನಗಳಲ್ಲಿ ಅದನ್ನು ನೋಡಿ ವಿಮರ್ಶಿಸಿದ್ದಾರೆ, ವಿಶ್ಲೇಷಿಸಿದ್ದಾರೆ. ಆ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಅವರುಗಳಲ್ಲಿ ಗೋವಿಂದಪೈ, ಕೈಲಾಸಂ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ಕಾರ್ನಾಡರು, ದ.ರಾ.ಬೇಂದ್ರೆ, ಕಾರಂತರು, ಕುವೆಂಪು, ತೀನಂಶ್ರೀ, ಬಿಎಂಶ್ರೀ, ದೇಜಗೌ..... ಮುಂತಾದ ಹಲವಾರು ಕನ್ನಡ ಬರಹಗಾರರು ತಮ್ಮ ಸಾಹಿತ್ಯದ ಪ್ರಕಾರಗಳಾದ ಕಥೆ ಕಾದಂಬರಿ, ನಾಟಕ, ವಿಮರ್ಶೆ, ಕವನ ಮುಂತಾದವುಗಳಲ್ಲಿ ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಇವುಗಳಲ್ಲಿ ನಾಟಕ ಪ್ರಕಾರವು ಹೆಚ್ಚು ವ್ಯಾಪಕತೆಯನ್ನು ಹೊಂದಿದ್ದು, ಇದು ವಸ್ತು, ಘಟನೆ, ವ್ಯಕ್ತಿ, ಸನ್ನಿವೇಶಗಳನ್ನು ಒಳಗೊಂಡಿದ್ದು, ಹೆಚ್ಚು ಚರ್ಚಿತ, ಆಸಕ್ತಿಕರವಾದ ಕ್ಷೇತ್ರವಾಗಿದೆ. ನಾಟಕಗಳಲ್ಲಿ ಮುಖ್ಯವಾಗಿ ಸುಖಾಂತ್ಯ ನಾಟಕಗಳು ಮತ್ತು ದುರಂತ ನಾಟಕಗಳು ಎಂಬುದಾಗಿ ವಿಭಾಗಿಸಲಾಗಿದ್ದು, ಬಹುತೇಕ ಭಾರತೀಯ ನಾಟಕಗಳು ಸುಖಾಂತ್ಯ ನಾಟಕಗಳಾಗಿದ್ದರೆ, ವಿದೇಶಿ ಕಥೆ, ವಸ್ತುಗಳನ್ನು ಒಳಗೊಂಡಿರುವ ನಾಟಕಗಳು ದುರಂತ

ನಾಟಕಗಳಾಗಿರುತ್ತವೆ. ಇದಕ್ಕೆ ಬಿ.ಎಂ.ಶ್ರೀ.ರವರ ಅಶ್ವತ್ಥಾಮನ್ ನಾಟಕವನ್ನು ಉದಾಹರಿಸಬಹುದು. ಇದು ಗ್ರೀಕ್ ಮೂಲದಾಗಿದ್ದು ದುರಂತದೊಂದಿಗೆ ಮುಕ್ತಾಯ-ವಾಗುತ್ತದೆ.

ಪ್ರಸ್ತುತ ಭಾಗದಲ್ಲಿ ನಾವು ಕುವೆಂಪುರವರ ಪೌರಾಣಿಕ ನಾಟಕಗಳನ್ನು ಅಧ್ಯಯನ ಮಾಡುತ್ತಿದ್ದೇವೆ. ಕುವೆಂಪು ನಾಟಕದಲ್ಲಿ ಕಂಡುಬರುವ ಪುರಾಣ ಕಥೆಗಳ, ವಸ್ತುಗಳ ಬಳಕೆ, ಪುರಾಣ ವಸ್ತುಗಳನ್ನು ಹೇಗೆ ಮೂಲಕ್ಕಿಂತ ಭಿನ್ನವಾಗಿ ತೋರಿಸಿದ್ದಾರೆ? ಪುರಾಣ ವಸ್ತುಗಳನ್ನು ಬದಲಾಯಿಸಲು ಕಾರಣವೇನು? ಯಾವ ಯಾವ ಅಂಶಗಳು ಈ ರೀತಿಯ ಪರಿವರ್ತನೆಗೆ ಕಾರಣವಾಗಿವೆ? ಎಂಬುದಕ್ಕೆ ಕುವೆಂಪುರವರಲ್ಲಿ ಅಡಕವಾಗಿರುವ ಸಾಮಾಜಿಕ ಬದ್ಧತೆ, ಮನುಜಮತ, ವಿಶ್ವಪಥ, ಅನಿಕೇತನಪ್ರಜ್ಞೆ, ವರ್ಣಸಮಾನತೆ, ಜಾತ್ಯಾತೀತತೆ, ಸಾರ್ವತ್ರೀಕರಣ ಸಾಮಾಜಿಕ ಸಮಾನತೆ, ಸ್ತ್ರೀಸ್ವಾತಂತ್ರ್ಯ, ನವೋದಯ, ಸರ್ವೋದಯ ಪ್ರಜ್ಞೆಗಳು ಅವರಲ್ಲಿದ್ದ ವೈಚಾರಿಕ ಪ್ರಜ್ಞೆಗಳನ್ನು ಕುರಿತು ~~ಈ ಭಾಗದಲ್ಲಿ~~ ಅಧ್ಯಯನ ಮಾಡುತ್ತೇವೆ. ಇದೇ ರೀತಿ ಮೂಲದಲ್ಲಿ ಉಂಟಾಗಿರುವ ನ್ಯೂನತೆಗಳನ್ನು ಸರಿಪಡಿಸಿ, ಪುರಾಣ ವ್ಯಕ್ತಿಗಳಾದ ಶ್ರೀರಾಮ, ಗುರು ದ್ರೋಣಾಚಾರಕ್ಕೆ ಪರಶುರಾಮ ಮುಂತಾದವರಿಗೆ ಅಂಟಿದ್ದ ಅಪವಾದವನ್ನು ಹೇಗೆ ತೊಳೆದಿದ್ದಾರೆ? ಸಮಾಜಕ್ಕೆ ಅವರನ್ನು ಹೇಗೆ ಸರ್ವಕಾಲಿಕ ಆದರ್ಶ ಪುರುಷರನ್ನಾಗಿ ಮಾಡಿದ್ದಾರೆ? ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ.

# ಅಧ್ಯಾಯ - ೨

## ಕುವೆಂಪುರವರ ಪೌರಾಣಿಕ ನಾಟಕಗಳ ಹಿನ್ನೆಲೆ

ಕನ್ನಡ ನಾಡಿನಲ್ಲಿ ಅಸ್ತಿತ್ವದಲ್ಲಿದ್ದ ನಾಟಕ ಪರಂಪರೆಯನ್ನು ಜನಪದ ನಾಟಕಗಳ ಪರಂಪರೆ ಮತ್ತು ಅಭಿಜಾತ ನಾಟಕಗಳ ಪರಂಪರೆ ಎಂದು ಎರಡು ಭಿನ್ನಪರಂಪರೆಯಲ್ಲಿ ಹರಿದುಬಂದಿದೆ. ಪ್ರಾಚೀನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಜನಪದ ರಂಗಭೂಮಿಯು ಜನಸಾಮಾನ್ಯರ ನಾಟಕಗಳಾಗಿ ರೂಪುಗೊಂಡವು. ಯಕ್ಷಗಾನ, ತಾಳಮದ್ದಲೆ, ತೊಗಲುಗೊಂಬೆಯಾಟ, ಸಣ್ಣಾಟ, ದೊಡ್ಡಾಟ, ಬಯಲಾಟಗಳಂತಹ ಜನಪದ ನಾಟಕಪ್ರಕಾರಗಳೇ ಈ ಜನಪದ ರಂಗಭೂಮಿಯಲ್ಲಿ ಬೆಳೆದು ಬಂದ ನಾಟಕ ಪ್ರಕಾರಗಳಾಗಿದ್ದು, ನಾಟಕ ಜನಸಾಮಾನ್ಯರ ಅಗತ್ಯವನ್ನು ಪೂರೈಸುತ್ತಿತ್ತು. ಡಾ. ಎಸ್.ಸುಂದರಮ್ಮ ಹೇಳುವಂತೆ ಜನಪದ ಪ್ರಕಾರಗಳು ಜನರ ಧಾರ್ಮಿಕ ಆರಾಧನೆಯ ಅಂಗವಾಗಿ ಹುಟ್ಟಿದ ನಾಟಕ ಪ್ರಕಾರಗಳಾಗಿವೆ. ಅಂದರೆ ಜಾತ್ರೆ, ಮಾರಿಹಬ್ಬ, ಯುಗಾದಿ, ದೀಪಾವಳಿ, ಸಂಕ್ರಾಂತಿಯಂತಹ ಹಬ್ಬಗಳಲ್ಲಿ ಜನರು ಆಚರಿಸುವ ಧಾರ್ಮಿಕ ಆಚರಣೆ ಉತ್ಸವಗಳ ಅಂಗವಾಗಿ ಈ ಜನಪದ ನಾಟಕ ಪ್ರಕಾರಗಳು ಬೆಳೆದುಬಂದವು. (ಡಾ. ಎಸ್.ಸುಂದರಮ್ಮ-ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು. ಐತಿಹಾಸಿಕ ನಾಟಕಹಿನ್ನೆಲೆ, ಪ್ರಬಂದದಲ್ಲಿ )

ಇಂತಹ ಜನಪದ ನಾಟಕಗಳ ವಸ್ತು ಸಾಮಾನ್ಯವಾಗಿ ಪೌರಾಣಿಕವಾಗಿದ್ದು, ಇವು ಬಹುತೇಕ ರಾಮಾಯಣ, ಮಹಾಭಾರತದಂತಹ, ಮಹಾಕಾವ್ಯಗಳಿಂದ ವಸ್ತು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದವು. ಇಂತಹ ನಾಟಕಗಳ ಪಾತ್ರಗಳೆಲ್ಲ ಸಾಮಾನ್ಯವಾಗಿ ದೇವತೆಗಳು ಮತ್ತು ಪುರಾಣ ಪುರುಷರಾಗಿರುತ್ತಿದ್ದರು. ಈ ಜನಪದ ನಾಟಕ ಪರಂಪರೆಯು ಮುಂದಿನ ನಾಟಕ ಪರಂಪರೆಗೆ ನಾಂದಿಯಾಗಿತ್ತು. ಈ ನಾಟಕಗಳು ಪ್ರಾಚೀನ ಕಾಲದಲ್ಲಿ ಜನರ ಅಗತ್ಯವಾಗಿ ರಂಗಭೂಮಿಯಲ್ಲಿ ಬೆಳೆದು ಬಂದಿತು. ಇದು ಜನಸಾಮಾನ್ಯರ ಬದುಕಿನ ಅರಿವನ್ನು ಜೀವನವಿಭಾಗಕ್ಕೆ ತುಂಬಾ ಹತ್ತಿರವಾಗಿತ್ತು. ಇದರಿಂದಾಗಿ ಜನರಿಗೆ ಇದರ ಬಗ್ಗೆ ಆಸಕ್ತಿ ಹೆಚ್ಚಾಗಿತ್ತು. ಈ ನಾಟಕಗಳ ಭಾಷೆ ಪಾತ್ರಗಳು ಸರಳವಾಗಿದ್ದು ಜನಸಾಮಾನ್ಯರಿಗೆ ಅರ್ಥವಾಗುವಂತಿದ್ದವು. ಜನಪದ ನಾಟಕಗಳಿಗೆ ಭಿನ್ನವಾದ ಮತ್ತೊಂದು ಕವಲು ಅಭಿಜಾತ ನಾಟಕ ಇದು ಅರಮನೆಯಲ್ಲಿ ರಾಜಮಹಾರಾಜರ ಸಮಾಜದ ಮೇಲ್ವರ್ಗದವರ ಕೃಪಾಪೋಷಿತವಾಗಿತ್ತು. ಇದರ ಭಾಷೆಯು ಸಂಪೂರ್ಣವಾಗಿ ಸಂಸ್ಕೃತಿ ಭಾಷೆಯಲ್ಲಿಯೇ ರಚಿತವಾಗಿರುತ್ತಿತ್ತು. ಇವುಗಳ ಪ್ರಯೋಗ ಅರಮನೆಗೆ ಸೀಮಿತವಾಗಿದ್ದವು. ಈ

ರೀತಿಯ ಅಭಿಜಾತ ಪರಂಪರೆಯಲ್ಲಿ ಕಂಡುಬಂದ ಕನ್ನಡದ ಮೊಟ್ಟಮೊದಲ ನಾಟಕವೆಂದರೆ, ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿಯಾದ ಸಿಂಗರಾರ್ಯನ 'ಮಿತ್ರಾವಿಂದ ಗೋವಿಂದ' ನಾಟಕವಾಗಿದೆ.

ಈ ಎರಡೂ ನಾಟಕ ಪರಂಪರೆಯನ್ನು ನೋಡಿದಾಗ ಜನಪದ ನಾಟಕ ಪರಂಪರೆಯು ಹೆಚ್ಚು ಜನಪ್ರಿಯವೂ, ಆಕರ್ಷಕವೂ ಆಗಿತ್ತು. ಕಾರಣವೇನೆಂದರೆ, ನಮ್ಮ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಗ್ರಂಥಗಳಲ್ಲಿ ಅನೇಕ ಉಪವಿಭಾಗಗಳು, ಖಂಡಗಳು, ಪರ್ವಗಳು ಇದ್ದು, ಇವು ಹಿಂದೂ ದೇವದೇವತೆ, ಋಷಿ ಮುನಿಗಳ ಪಾತ್ರಗಳಿಂದ ಹಾಗೂ ಸಮಾಜದ ಆದರ್ಶಪುರುಷರಿಂದ ಪೌರಾಣಿಕ ಕಥೆಗಳಿಂದ, ಪಾತ್ರಗಳಿಂದ, ಘಟನೆಗಳಿಂದ ತುಂಬಿಹೋಗಿದ್ದು ಇವುಗಳು ನಮ್ಮ ಜನಾಂಗಕ್ಕೆ ಮೌಖಿಕವಾಗಿ ನೀತಿವಾಕ್ಯವಾಗಿ, ಘಟನೆಗಳಾಗಿ, ಕಟ್ಟುವಿಧಿಗಳಾಗಿ ನಿರಂತರವಾಗಿ ತಲೆಮಾರಿನಿಂದ ತಲೆಮಾರಿಗೆ ಹರಿದುಕೊಂಡು ಬಂದಿದ್ದು ಇಂತಹ ವಿಶಾಲ ತಳಹದಿಯ ಕ್ಷೇತ್ರದ ನಾಟಕವು ಸಾಮಾನ್ಯವಾಗಿ ಸಾರ್ವತ್ರಿಕವಾಗಿ ಕುತೂಹಲವೂ, ಆಸಕ್ತಿದಾಯಕವೂ ಆಗಿದ್ದು, ತಮ್ಮ ಪುರಾಣ ಪುರುಷರ, ದೇವತೆಗಳ ಸಾಂಸ್ಕೃತಿಕ ವೈಭವವನ್ನು ಸಾರುವ ರಂಗಭೂಮಿಗಳಾಗಿ ಹಲವು ನಾಟಕಕಾರರಿಗೆ ಸಾಹಿತಿಗಳಿಗೆ, ವಿಮರ್ಶಕರಿಗೆ, ಉತ್ತಮ ವೇದಿಕೆಯಾಗಿ ಈಗಲೂ ಪ್ರಸ್ತುತವಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ 'ಮಿತ್ರಾವಿಂದಾ ಗೋವಿಂದ' ನಾಟಕವು ಕನ್ನಡದಲ್ಲಿ ದಾಖಲಾಗಿರುವ ಮಹತ್ವದ ನಾಟಕವಾಗಿದೆ. ಮೈಸೂರು ಒಡೆಯರು ತಮ್ಮ ಕಾಲದಲ್ಲಿ ನಾಟಕ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಇವರ ಫಲವಾಗಿ ಅನೇಕ ನಾಟಕಗಳು ರಚಿತವಾದವು. ಇವುಗಳಲ್ಲಿ ಹೆಚ್ಚಾಗಿ ಅನುವಾದಿತ ನಾಟಕಗಳು ಇದ್ದವು, ಇವು ಸಂಸ್ಕೃತ ಮೂಲದಿಂದ ಬಂದಿದ್ದವು. ಬಸಪ್ಪ ಶಾಸ್ತ್ರಿಗಳು ಕಾಳಿದಾಸನ 'ಶಾಕುಂತಲ ನಾಟಕ'ವನ್ನು ಭಾಷಾಂತರಿಸಿದ್ದು ಇದಕ್ಕೆ ಉದಾಹರಣೆಯಾಗಿದೆ.

೨೦ನೇ ಶತಮಾನದಲ್ಲಿ ಕನ್ನಡಿಗರಿಗೆ ನಾಟಕಗಳ ನಿಜವಾದ ಸತ್ವವನ್ನು ಮನಗಾಣಿಸಿದವರು ಬಿ.ಎಂ.ಶ್ರೀಕಂಠಯ್ಯನವರು. ಇವರು ಗ್ರೀಕ್ ನಾಟಕಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದು ಕನ್ನಡ ನಾಟಕ ಸಾಹಿತ್ಯಕ್ಕೆ ವರವಾಗಿ ಪರಿಣಮಿಸಿತು. ಗ್ರೀಕ್ ನಾಟಕವೊಂದನ್ನು ಮಾದರಿಯಾಗಿಟ್ಟುಕೊಂಡು ರಚಿತವಾದ 'ಅಶ್ವತ್ಥಾಮನ್' ಕನ್ನಡದ ಮೊದಲ ಸ್ವತಂತ್ರ ನಾಟಕವೆನ್ನುಬಹುದು. ಇದರ ವಸ್ತು ಮಹಾಭಾರತ ದ್ದಾದರೂ ಅದರ ಪುನಃ ಸೃಷ್ಟಿ ಸಂಪೂರ್ಣವಾಗಿ ಬಿ.ಎಂ.ಶ್ರೀರವರದ್ದು. ಅನಂತರ ಹೆಚ್ಚಿನ ನಾಟಕಗಳನ್ನು ಬರೆದವರು, ಕೈಲಾಸಂರವರು. ಇವರ ನಾಟಕಗಳು ತತ್ಕಾಲೀನ ಪರಿಸ್ಥಿತಿಗೆ ಮಾತ್ರ ಸೀಮಿತವಾಗಿ ಸರ್ವಕಾಲೀಕವಾಗುವುದರಲ್ಲಿ ಸೋತವು. "ಒಂದು ಉತ್ತಮ ಸಾಹಿತ್ಯಕೃತಿ ಸದ್ಯಕಾಲಿಕವಾಗುವುದರ ಜೊತೆಗೆ ಸರ್ವಕಾಲಿಕವೂ ಆಗಬೇಕು

ಎಂಬ ದೃಷ್ಟಿಯಿಂದ ನಾಟಕಗಳನ್ನು ಶೋಧಿಸುತ್ತಾ ಹೊರಟಾಗ ಕುವೆಂಪು ಅವರ ನಾಟಕಗಳು ಗೋಚರವಾಗುತ್ತವೆ." ಕುವೆಂಪುರವರ ನಾಟಕಗಳು ಸರ್ವಕಾಲಿಕವೂ ಆಗಿದ್ದು ಇಂದಿನ ಸಮಾಜಕ್ಕೆ ಆದರ್ಶವಾದ ತತ್ವಗಳನ್ನು ಹೊಂದಿವೆ. ಅವುಗಳಲ್ಲಿ ಶೂದ್ರ ತಪಸ್ವಿ, ಬೆರಳ್‌ಗೆ ಕೊರಳ್, ಜಲಗಾರ ನಾಟಕಗಳು ಇಂತಹ ಸಾಲಿನಲ್ಲಿ ನಿಲ್ಲುತ್ತವೆ."[೧] ಕುವೆಂಪು ಅವರು ತಮ್ಮ ನಾಟಕಗಳಿಗೆ ವಸ್ತುವನ್ನು ಪುರಾಣಗಳಿಂದ, ಕಾವ್ಯಗಳಿಂದ,ಇತಿಹಾಸದಿಂದ ಸ್ವೀಕರಿಸಿದ್ದಾರೆ. ಆದರೆ ಹಾಗೇ ಸ್ವೀಕರಿಸಿಯೂ ಅವು ಸ್ವತಂತ್ರ ನಾಟಕಗಳನ್ನಾಗಿಸಿದ್ದಾರೆ. ಅಕ್ಕಸಾಲಿಗನು ಚಿನ್ನದ ಒಡವೆಯನ್ನು ಕರಗಿಸಿ ಹೊಸ ಆಭರಣ ಮಾಡುವಂತೆ ಕುವೆಂಪು ನಾಟಕದ ಹೊಸ ತತ್ವವನ್ನು ಹೊಸ ದೃಷ್ಟಿಯನ್ನು ನೀಡಿದ್ದಾರೆ. ಮೂಲದಲ್ಲಿ ನಿರ್ಜೀವವಾಗಿದ್ದು, ಕಳಂಕಿತವಾಗಿದ್ದ, ಗೌಣ-ವಾಗಿದ್ದ ಪಾತ್ರಗಳಿಗೆ, ವ್ಯಕ್ತಿಗಳಿಗೆ ತಮ್ಮ ನಾಟಕಗಳಲ್ಲಿ ಜೀವಂತಿಕೆಯನ್ನು ನೀಡಿದ್ದಾರೆ. ಯಾವುದೇ ತರತಮ ಭಾವಕ್ಕೆ ಅವಕಾಶ ನೀಡದೇ ಎಲ್ಲವನ್ನು ಆದರ್ಶಪ್ರಾಯ-ವನ್ನಾಗಿಸಿದ್ದಾರೆ.

ಕುವೆಂಪುರವರು ಒಟ್ಟು ಎಂಟು ಪೌರಾಣಿಕ ನಾಟಕಗಳನ್ನು ಬರೆದಿದ್ದು, ಅವುಗಳು ಯಮನಸೋಲು-೧೯೨೮, ಜಲಗಾರ-೧೯೨೮, ವಾಲ್ಮೀಕಿಯ ಭಾಗ್ಯ-೧೯೩೧, ಸ್ಮಶಾನ ಕುರುಕ್ಷೇತ್ರ-೧೯೩೧, ಶೂದ್ರತಪಸ್ವಿ-೧೯೪೪, ಬೆರಳ್‌ಗೆಕೊರಳ್-೧೯೪೭, ಚಂದ್ರಹಾರ-೧೯೬೩ ಮತ್ತು ಕಾನೀನ-೧೯೭೪ ನಾಟಕಗಳಾಗಿದ್ದು ಇವು ನಮ್ಮ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ಮತ್ತು ಪುರಾಣ ಪ್ರಸಿದ್ಧ ಮೂಲ ಭಾಗಗಳನ್ನು ತೆಗೆದುಕೊಂಡು ಅವುಗಳ ಮೇಲೆ ವಿವಿಧ ಕ್ಷೇತ್ರಗಳ ಮೇಲೆ ವಿವಿಧ ದೃಷ್ಟಿಕೋನಗಳಿಂದ ವಿಶ್ಲೇಷಿಸಿದ್ದಾರೆ. ಈ ಮೂಲ ನಾಟಕಗಳನ್ನು ರಚಿಸುವಾಗ ಕುವೆಂಪುರವರ ಕಥಾ ನಾಯಕನಿಗೆ ಹಿಂದಿನಿಂದಲೂ ಅಂಟಿದ್ದ ಅಪವಾದವನ್ನು ತೊಡೆದುಹಾಕಿ ತಮ್ಮ ನಾಟಕದಲ್ಲಿ ಅವನನ್ನು ಆದರ್ಶಪ್ರಾಯರನ್ನಾಗಿಸಿದ್ದಾರೆ. ಶ್ರೀರಾಮ, ದ್ರೋಣ, ಕರ್ಣ ಮುಂತಾದವರ ಪಾತ್ರಗಳಲ್ಲಿ ಇಂದಿನ ಸಮಾಜದ ಕೇಂದ್ರಬಿಂಬಿತ ನಾಯಕರನ್ನಾಗಿಸಿದ್ದಾರೆ.

ಹಾ.ತಿ.ಕೃಷ್ಣೇಗೌಡರು ಹೇಳುವಂತೆ "ಕುವೆಂಪುರವರ ನಾಟಕ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕಗಳು ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಕುವೆಂಪುರವರ ನಾಟಕಗಳಲ್ಲಿ ಮುಖ್ಯವಾಗಿ ಹಲವಾರು ಉದ್ದೇಶಗಳಿವೆ. ಮಾನವನ ಬದುಕು ಉದಾತ್ತವಾಗಿದ್ದು, ಮೋಸ, ಕೀಳುತನ, ಕಪಟ, ವಂಚನೆ, ಸ್ವಾರ್ಥ ಮೊದಲಾದವುಗಳಿಂದ ದೂರವಾಗಿರಬೇಕು. ದೇಶಪ್ರೇಮ,

---

೧. ಹಾ.ತಿ.ಕೃಷ್ಣೇಗೌಡ, ಕುವೆಂಪು ನಾಟಕ ವಿಹಾರ – ಸಂಪಾದಕರು, ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೭

ಭಾಷಾಪ್ರೇಮ, ಹಿರಿಯರ ಬಗ್ಗೆ ಗೌರವ, ಕಿರಿಯರ ಬಗ್ಗೆ ಮಮತೆ, ಸಹಾನುಭೂತಿ ಇರಬೇಕು" ಎಂಬುದು ಕುವೆಂಪುರವರ ದೃಷ್ಟಿ ಎಲ್ಲದಕ್ಕಿಂತ ಬದುಕು ಪರಿಶುದ್ಧ-ವಾಗಿರಬೇಕು ಎಂಬುದು ಅವರ ನಿಲುವು. (ಹಾ.ತಿ.ಕೃಷ್ಣೇಗೌಡ, ಕುವೆಂಪು ನಾಟಕ ವಿಹಾರ (ವಸ್ತುವಿನ್ಯಾಸದಲ್ಲಿ) – ಸಂಪಾದಕ: ದೇಜಗೌ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೩)

ಒಟ್ಟಾರೆಯಾಗಿ ಕುವೆಂಪು ನಾಟಕಗಳ ಪರಿವರ್ತನೆಗೆ ಅವರಲ್ಲಿದ್ದ ಸರ್ವೋದಯತೆ, ಸಮಾನತೆ ಸಾಮಾಜಿಕ ಸಮಾನತೆ, ಸ್ತ್ರೀ ಸ್ವಾತಂತ್ರ್ಯ, ವರ್ಣಸಮಾನತೆ, ರಾಮಕೃಷ್ಣ, ಶಾರದಾದೇವಿ ಮತ್ತು ಸ್ವಾಮಿ ವಿವೇಕಾನಂದರ ಪ್ರಭಾವ ಪ್ರೇರಣೆ, ರಾಮಕೃಷ್ಣಾಶ್ರಮದಲ್ಲಿ ಅವರ ಬಾಲ್ಯದಲ್ಲಿ ಉಂಟಾದ ಪ್ರಭಾವ, ಪರಿಸರಗಳು ಈ ಎಲ್ಲಾ ಅಂಶಗಳು ಪ್ರತ್ಯೇಕವಾಗಿ ಹಾಗೂ ಪರೋಕ್ಷವಾಗಿ ಪ್ರಭಾವ ಬೀರಿವೆ. ಇವುಗಳನ್ನು ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನದಿಂದ ತಿಳಿದುಬರುತ್ತದೆ.

# ಅಧ್ಯಾಯ – ೩

# ಕುವೆಂಪು ನಾಟಕಗಳಲ್ಲಿ ಪುರಾಣ ಕಥೆಗಳ ಪರಿವರ್ತನೆ

## ನಾಟಕ–ಯಮನ ಸೋಲು

ಆಕಾಶ ಮಾರ್ಗದಲ್ಲಿ ಯಮದೂತನೊಬ್ಬನನ್ನು ಯಕ್ಷನೊಬ್ಬನು ಎದುರು-ಗೊಂಡು ಸತ್ಯವಾನ್ ಸಾವಿತ್ರಿಯ ಕಥೆಯನ್ನು ಯಕ್ಷನಿಗೆ ಹೇಳುತ್ತಾನೆ. ಯಮದೂತನು ತನ್ನ ಒಡೆಯನಾದ ಯಮನ ಆಜ್ಞೆಯಂತೆ ಸಾವಿತ್ರಿಯ ಪತಿಯಾದ ಸತ್ಯವಾನನ ಪ್ರಾಣವನ್ನು ತೆಗೆದುಕೊಂಡು ಹೋಗಲು ಬಂದಿರುತ್ತಾನೆ. ಯಕ್ಷನ ಒತ್ತಾಸೆಗೆ ಮಣಿದು ಇಬ್ಬರ ಕಥೆಯನ್ನು ಹೇಳುವನು. ಪ್ರಭುಶಂಕರ್‌ರ ಅವರು ಗುರುತಿಸುವಂತೆ, "ಮೃತ್ಯುಮೀಮಾಂಸೆಯಲ್ಲಿ ಎರಡು ಪ್ರತಿಮೆಗಳು ಭಾರತೀಯ ಪ್ರಾಚೀನ ಪರಂಪರೆ-ಯಲ್ಲಿ ಪ್ರಮುಖ ಪಾತ್ರ ವಹಿಸಿವೆ. ಒಂದು ನಚಿಕೇತನದು ಮತ್ತೊಂದು ಸಾವಿತ್ರಿಯದು, ನಚಿಕೇತನ ಮೃತ್ಯುವಿನ ಅರ್ಥ ತಿಳಿಯುವ ಜಿಜ್ಞಾಸು, ಸಾವಿತ್ರಿ ಮೃತ್ಯುವಿನ ವಜ್ರಕಠೋರ ನಿಯಮವನ್ನು ಸಡಿಸಲು ಪ್ರಯತ್ನಿಸುವವಳು, ಅದರಲ್ಲಿ ಸಾಕಷ್ಟು ಯಶಸ್ಸು ಗಳಿಸುವವಳು. ಸಾವಿತ್ರಿ ತಪಸ್ಸಿನಿಂದ ಮೃತ್ಯುವನ್ನು ಗೆಲ್ಲಲು, ಮುಂದೂಡಲು ಸಾಧ್ಯ ಎಂಬುದನ್ನು ತೋರಿಸಿದಳು. ತಪಸ್ಸಿಗೆ ಅಂಥ ಶಕ್ತಿಯುಂಟೆಂದು ಜನರ ಮನಸ್ಸಿಗೆ ಅರಿವು ಮೂಡಿಸುವುದು ವ್ಯಾಪಕ ಉದ್ದೇಶ.[೧]

ಸಾವಿತ್ರಿ ಅಶ್ವಪತಿಯೆಂಬ ರಾಜನ ಕುವರಿ. ಭಕ್ತಿಯಿಂದ ಶಿವನನ್ನು ಆರಾಧಿಸಿದ್ದರಿಂದಾಗಿ ಜನಿಸಿದಳು. ಸೌಂದರ್ಯದಲ್ಲಿ ಅವಳನ್ನು ಮೀರಿಸುವವರಿಲ್ಲ, ಪಾತಿವ್ರತ್ಯದಲ್ಲಿ ಅವಳಿಗೆ ಯಾರೂ ಎಣೆಯಿರಲಿಲ್ಲ. ಪ್ರಾಪ್ತವಯಸ್ಸಿಗೆ ಬಂದಾಗ ದೊರೆಯು ಅನುರೂಪನಾದ ವರನನ್ನು ಹುಡುಕಿ ವಿಫಲನಾಗಿ, ತನ್ನ ಪತಿಯನ್ನು ತಾನೇ ಹುಡುಕಿ ತರುತ್ತೇನೆಂದು ಹೇಳಿದ ಆಕೆಯ ಮಾತಿಗೆ ಮನ್ನಣೆಯನ್ನಿತ್ತು ಕಳುಹಿದನು. ದೇಶ, ದೇಶಗಳನ್ನು ಹುಡುಕಿ ಅನುರೂಪನಾದ ವರನು ದೊರೆಯದೇ ಕೊನೆಗೆ ಒಂದು ಋಷಿಯ ಆಶ್ರಮಕ್ಕೆ ಬಂದಳು. ಅಲ್ಲಿ ಶತ್ರುಗಳ ದಾಳಿಯಿಂದ ರಾಜ್ಯಕಳೆದುಕೊಂಡು, ಕುರುಡಾಗಿ ಕಾಡಿಗೆ ಬಂದು ಋಷಿ ವೇಷದಲ್ಲಿದ್ದ ದ್ಯುಮತ್ಸೇನ ಅರಸನ ಮಗನಾದ ಸತ್ಯವಾನ್ ಎಂಬ ಶುದ್ಧಾತ್ಮನನೊಲಿದು ವರಿಸಿದಳು. ಸತ್ಯವಾನನು ಸುಂದರನೂ, ಯೌವ್ವನನೂ ಆಗಿದ್ದು, ಸಾವಿತ್ರಿಯು ಅವನ ಸೌಂದರ್ಯಕ್ಕೆ ಮರುಳಾಗಲಿಲ್ಲ. ಅವನಲ್ಲಿದ್ದ ಶುಚಿ ಶೀಲಕ್ಕೆ ಮರುಳಾದಳು.

---

೧. ವಸಂತಕುಮಾರ್ ಮಳಲಿ, ಕುವೆಂಪು ನಾಟಕ ಸಮೀಕ್ಷೆ, ಸುರುಚಿ ಪ್ರಕಾಶನ, ೧೯೭೨, ಪು. ೧೯೫.

ಅಶ್ವಪತಿಯು ಆತನನ್ನು ಒಪ್ಪಿದನು ಈ ವೇಳೆಗೆ ನಾರದರಿಂದ ಸಾವಿತ್ರಿಯನ್ನು ಒಲಿದವನು ಅಲ್ಪಾಯು ಎಂದು ತಿಳಿದು ಬೆಚ್ಚಿದನು. ಆದರೂ ಸಾವಿತ್ರಿಯು ಚೈತ್ರಮಾಸದಲ್ಲಿ ತಳಿತೆಸೆವ ವನದಂತೆ ಆಕೆಯ ಒಲುಮೆಯು ಹಿಗ್ಗಿತು. ಒಮ್ಮೆ ಒಬ್ಬನಿಗೆ ಒಲಿದ ಶುಚಿಯೊಲವು ಮತ್ತೊಬ್ಬನನ್ನು ಕಣ್ಣೆತ್ತಿ ನೋಡುವುದು ಆಗದು ಎಂಬ ತತ್ವದಡಿಯಲ್ಲಿ ಸಾವಿತ್ರಿ ಸತ್ಯವಾನನನ್ನು ಮದುವೆಯಾಗಿ ಅತ್ತೆಮಾವರಿಗೆ ಉಪಚಾರ ಮಾಡಿ ಪತಿಯನ್ನು ಅನುಸರಿಸುತ್ತಾ ಕಾಡಿನಲ್ಲಿರುವಳು. ತನ್ನ ಪತಿಗಿದೆ ಕಡೆಯ ದಿನಗಳೆಂದು ಅರಿತು ಮೂರು ದಿನದಿಂದ ಪೂಜೆ, ಉಪವಾಸಗಳನ್ನು ಮಾಡುತಿಹಳು. ದಿನವೂ ಪರಮೇಶ್ವರನನ್ನು ಬೇಡುತಿಹಳು.

ಹೀಗೆ ಸಾವಿತ್ರಿಯ ಸ್ಥಿತಿಯನ್ನು ಕಂಡು ಯಮದೂತನೂ ಮರುಗುವನು ಆದರೂ 'ನಾನೇನು ಮಾಡಬಲ್ಲೆ? ಜವರಾಯನಿತ್ತ ಕ್ರೂರಾಜ್ಞೆಯಂ ನಾನು ಮೀರಲಾರೆನು' ಎಂದು ಮರುಗಿ ಯಕ್ಷನ ಜೊತೆ ಬ್ರಹ್ಮಾಂಡದಲ್ಲಿ ಕೋಟಿಯುಡುಗಳ ನಡುವೆ ಮಿಣುಕುತಿಹ ಮುದ್ದಾದ ಭೂಗ್ರಹಕ್ಕೆ ಬರುವರು.

ಸಾವಿತ್ರಿಯು ಆಶ್ರಮದ ಪಕ್ಕದ ಒಂದು ಎಲೆವನದ ಶಿವಗುಡಿಯಲ್ಲಿ ಪೂಜೆ ಧ್ಯಾನಾದಿಗಳಲ್ಲಿ ತೊಡಗಿ, ಸೂರ್ಯನನ್ನು ಏಳದಿರು ಎಂದೂ ಕಾಲಚಕ್ರವನ್ನು ನಿಲ್ಲು, ಚಂದ್ರಮರೆಯಾಗಬೇಡ, ಚುಕ್ಕಿಗಳೇ ತೆರಳಬೇಡಿರಿ, ಕೋಗಿಲೆಯೇ ಕೂಗದಿರು, ಕೂಗಿ ಜವಗಂಟೆಯನ್ನು ಬಡಿಯದಿರು, ನೆನಪಕೊಡದಿರು ಜವಗೆ, ಚಲಿಸದಿರಿ, ಮರ್ಮರ ನಿನಾದವಂ ಮಾಡದಿರಿ, ಎಲೆತಳಿತ ತರುಗಳಿರ! ಬೀಸದಿರು ಮಾರುತನೆ ಎಂದು ಪ್ರಕೃತಿಯ ಚರಾಚರ ವಸ್ತುಗಳಿಗೂ, ಸೃಷ್ಟಿಯ ಭಾಗಗಳಿಗೂ ಬೇಡಿಕೊಳ್ಳುವಳು, ಪ್ರಕೃತಿಯೇ ಸ್ತಬ್ದವಾಗುವಂತೆ ಕೋರುವಳು ಕಾರಣ ಚಲಿಸಿದರೆ ನಾಳೆ ಯಮನು ಬಂದು ತನ್ನ ಪತಿಯ ಜೀವನನ್ನು ಹರಣ ಮಾಡುವನೆಂದು ಆ ದಿನ ಬರಬಾರದೆಂದು ಸಾವಿತ್ರಿಯು ಪ್ರಕೃತಿಯ ಸ್ತಬ್ಧತೆಗೆ ಪ್ರಾರ್ಥಿಸುವಳು.

ಈ ಸಮಯದಲ್ಲಿ ಬಾಗಿಲು ಬಡಿದ ಶಬ್ದ ಕೇಳುತ್ತದೆ, ಜವರಾಯನೆಂದು ತಿಳಿದು ಬಾಗಿಲು ತೆರೆಯುವಳು, ಕೈಯಲ್ಲಿ ಹೂಬುಟ್ಟಿ ಹೆಗಲ ಮೇಲೆ ಕೊಡಲಿ ಹಿಡಿದು ಸತ್ಯವಾನನ ಪ್ರವೇಶವಾಗುತ್ತದೆ. ಬಾಗಿಲು ತೆಗೆಯಲು ತಡಮಾಡಿದ್ದಕ್ಕೆ ಕ್ಷಮೆ ಕೇಳಿ ಪೂಜೆ ಮಾಡುತ್ತಿದ್ದರಿಂದ ತಡವಾಯ್ತು ಎಂಬ ಕಾರಣವನ್ನು ನೀಡುವಳು. ಸತ್ಯವಾನನು ಸಾವಿತ್ರಿಯ ಮುಖದಲ್ಲಿ ಉದ್ವೇಗ ಗುರುತಿಸಲು ದೇವರಾಧನೆಗೆ ಜಾಗರಣೆ ಮಾಡಿದೆನೆಂದು ತಿಳಿಸಿ ಬಾ ನೀನು ಈಶನನ್ನು ಪೂಜಿಸುವಂತೆ ಎಂದು ಕರೆದು ಸತಿಪತಿಯರಿಬ್ಬರೂ ಪೂಜಿಸುವರು. ಸಾವಿತ್ರಿಗೆ ತನ್ನ ಪತಿಯು ಎಂದೂ ಕಾಣದ ರೀತಿಯಲ್ಲಿ ಅಂದವಾಗಿಯೂ, ಪ್ರಿಯವಾಗಿಯೂ ಕಾಣುತ್ತಾನೆ. ಸಾವಿತ್ರಿಯು ತಾನೂ ಸತ್ಯವಾನನೊಡನೆ ಕಾಡಿಗೆ ಬರುವನೆಂದು ಹೇಳಿ ಅವಳ ಒತ್ತಾಯಕ್ಕೆ ಮಣಿದು

ಸತ್ಯವಾನನು ಸಮ್ಮತಿಸುವನು, ನಂತರ ತನ್ನ ಹೆದರಿಕೆಗೆ ಕಾರಣವನ್ನು ಸಾವಿತ್ರಿಯು ಭಯಂಕರ ಕನಸನ್ನು ತಿಳಿಸುವಳು 'ಘೋರ ಕಾನನದಲ್ಲಿ ನಿನ್ನನ್ನು ಕೊಂಡೊಯ್ದಂತೆ ಕನಸಾಯ್ತು ಇನಿಯ' ಎಂಬ ತನ್ನ ದುಷ್ಟ ಶಕುನವನ್ನು ತಿಳಿಸುವಳು

ಸಾವಿತ್ರಿಯು ಸತ್ಯವಾನನ ಜೊತೆಗೂಡಿ ಕಾಡಿನಲ್ಲಿ ಹೂವನ್ನು ಆಯ್ದು ಅರಣ್ಯದ ಮಧ್ಯ ಬರುತ್ತಾರೆ. ಸತ್ಯವಾನನು ತಾನು ಹುಲಿಯಬಾಯಿಂದ ಜಿಂಕೆಯನ್ನು, ಉರಗದ ಬಾಯಿಂದ ಕೋಗಿಲೆಯನ್ನು, ರಕ್ಷಿಸಿದ್ದಾಗಿ ಹೇಳುವಾಗ ಸಾವಿತ್ರಿಯು ಆ ಪುಣ್ಯವು ನಿನ್ನನ್ನು ಈ ದಿನ ಬಂದು ರಕ್ಷಿಸಲಿ ಎಂದು ಮನಸ್ಸಿನಲ್ಲೇ ಹಾರೈಸುವಳು. ಸಾವಿತ್ರಿಗೆ ಸೀತಾಳಿ ಹೂಗಳು ಬೇಕೆ? ಎಂದಾಗ ನಿರಾಕರಿಸುವಳು, ಮುತ್ತುಗದ ಹೂಗಳನ್ನು ಮಸಣದ ಸೂಡುಗಳಂತೆ ಕಾಣಿಸುತಿದೆ ಎಂದು ಹೇಳಿ ತನ್ನ ಅಮಂಗಳ ನುಡಿಗೆ ಸತ್ಯವಾನನಲ್ಲಿ ಕ್ಷಮೆ ಕೋರುವಳು. ನಂತರ ಇಬ್ಬರೂ ದಣಿವಾಗಿ ತಿಳಿನೀರ ವಾಹಿನಿಯ ತೀರಕ್ಕೆ ಬರುವರು.

ಸಂಧ್ಯಾಕಾಲದ ಸಮಯದಲ್ಲಿ ಅರಣ್ಯದಲ್ಲಿ ಸತ್ಯವಾನನು ಸಾವಿತ್ರಿಯ ಕೈಹಿಡಿದು ಬರುತ್ತಿರಬೇಕಾದರೆ, ಸತ್ಯವಾನನಿಗೆ ಸ್ವಲ್ಪ ತಲೆ ತಿರುಗಿದಂತಾಗಿ, ತಲೆ ನೋವು ಹೆಚ್ಚಾಗಿ ಸಾವಿತ್ರಿಯ ತೊಡೆಯ ದಿಂಬಿನಲ್ಲಿ ಮಲಗುವನು. ಸಾವಿತ್ರಿಯ ಈ ನಿದ್ದೆ ಜವರಾಯನ ನಿದ್ರೆಯಾಗದಿರಲೆಂದು ಎಣಿಸಿ, ಪ್ರಕೃತಿ ಸೃಷ್ಟಿಯ ಚರಾಚರತೆಗೆ ತನ್ನ ಗಂಡನನ್ನು ರಕ್ಷಿಸುವಂತೆ ಮೊರೆವಳು.

ಇದೇ ವೇಳೆಗೆ ಸತ್ಯವಾನನ ಪ್ರಾಣ ಹರಣಕ್ಕೆಂದು ಯಕ್ಷನ ಜೊತೆಗೂಡಿಬಂದ ಯಮದೂತನು ಸಾವಿತ್ರಿಯ ಹದಿಬದೆಯ ಜ್ವಾಲೆಯಾಳು ಸಿಕ್ಕಿ ಬೆಂದು ಬಾಡಿ ತನ್ನಿಂದ ಇದು ಅಸಾಧ್ಯ ಕೆಲಸ ಎಂದು ಎಣಿಸಿ ಯಮರಾಯನಿಗೆ ತಿಳಿಸಲು ಓಡಿದನು. ಸತ್ಯವಾನನು ಸಾವಿತ್ರಿಯ ತೊಡೆಯ ಮೇಲೆ ಮಲಗಿರುವನು. ಯಮನು ಅವನ ಮುಂದೆ ನಿಂತಿರುತ್ತಾನೆ, ಸಾವಿತ್ರಿಯು ಆ ಭೀಕರ ಆಕೃತಿಯನ್ನು ಯಾರೆಂದು ಕೇಳಲು ಯಮನು ಜಗದ ಧರ್ಮಾಧಿಕಾರಿಯೂ ಆದ ಯಮನೆಂಬುವನು ನಾನೇ! ಎಂದು ಹೇಳುವನು. ಯಮನು ಸಾವಿತ್ರಿಗೆ ದೂರಸರಿ ನನ್ನ ಕರ್ತವ್ಯ ಪಾಲನೆಗೆ ಅಡ್ಡ ಬರಬೇಡ, ನಾನು ಸತ್ಯವಾನನ ಪ್ರಾಣವನ್ನು ಕೊಂಡೊಯ್ಯಲು ಬಂದಿರುವೆ, ನಿನ್ನ ಬಳಿ ಬರಲಾರೆ ತಾಯೆ, ದಯೆಯಿಂದ ದೂರ ಸರಿ ಎಂದು ಅವಳ ಪಾತಿವ್ರತ ಶಕ್ತಿಗೆ ಹೆದರುವನು.

ಸಾವಿತ್ರಿಯು ನನ್ನ ಮೇಲಿನ ಕರುಣೆಯಿಂದ ನನ್ನ ಗಂಡನನ್ನು ಬಿಡಲಾರೆಯಾ? ಎಂದಾಗ ಇದು ಪ್ರಕೃತಿಧರ್ಮ, ವಿಶ್ವಧರ್ಮಕ್ಕೆ ಎರಡು ನಾಲಿಗೆಯಿಲ್ಲ. ಶ್ರೀರಾಮ, ಕೃಷ್ಣ, ವಾಲ್ಮೀಕಿ ಮುಂತಾದವರು, ನನ್ನೊಡನೆ ಮರುಮಾತನಾಡದೆ ಬಂದಿಹರು, ಹುಟ್ಟಿದ-ವರೆಲ್ಲರಿಗೂ ಮರಣ ಉಂಟು? ಜನನ ಮರಣವನ್ನು ಎಳೆದುಕೊಂಡು ಬರುವುದು ತಾಯೇ ಸಾವಿತ್ರಿ ದಾಟಬಿಡು ವಿನಯದಿಂದ ಬೇಡುವೆನು. ಸಾವಿತ್ರಿಯು ಹಾಗಾದರೆ

ನನ್ನ ಪತಿಯೊಡನೆ ನನ್ನ ಪ್ರಾಣವನ್ನು ತೆಗೆದುಕೊಂಡು ಹೋಗು ಎನ್ನುವಳು, ಅದಕ್ಕೆ ಆಯುಷ್ಯವಿದ್ದವರನ್ನು ಕೊಂಡೊಯ್ಯುವುದು ಧರ್ಮಕ್ಕೆ ವಿರುದ್ಧ, ಸಾವಿನ ದಿನ ಒದಗಿ ಬರದೆ ನಾನು ಒಂದು ಕೀಟವನ್ನು ಕೊಂಡೊಯ್ಯಲಾರೆ ಎಂದು ಯಮನು ಹೇಳುವನು.

ನಂತರ ಸಾವಿತ್ರಿಯ ಧರ್ಮವೊಲವಿಗೆ ಶರಣು ಮಾಡುವೆನು ಎಂದು ತನ್ನ ಪತಿಯಿಂದ ದೂರ ಸರಿದು ನಿಲ್ಲುವಳು, ಸತ್ಯವಾನನ ಪ್ರಾಣವನ್ನು ತೆಗೆದುಕೊಂಡು ಸಾವಿತ್ರಿಗೆ ನಮಿಸಿ ಯಮನು ಹೋಗುವನು. ಸಾವಿತ್ರಿಯೂ ಯಮನನ್ನು ಅನುಸರಿಸಿ ಹೋಗುವಳು, ಏಕೆಂದು ಕೇಳಲು 'ನಾನು ನಿನ್ನನ್ನು ಅನುಸರಿಸುತ್ತಿಲ್ಲ ಯಮದೇವ ನನ್ನ ಪತಿಯನ್ನನುಸರಿಸಿ ಬರುತಿಹೆನು. ನಿನ್ನ ಧರ್ಮ ನೀನು ಮಾಡು ನನ್ನ ಧರ್ಮ ನಾನು ಮಾಡುವೆನು, ಸತ್ತ ಗಂಡನನ್ನು ಅನುಸರಿಸುವುದು ಪತಿವ್ರತಾಧರ್ಮ ಎಂದು ಹೇಳುವಳು. ಇದರಿಂದ ಸಾವಿತ್ರಿಯ ಪಾತಿವ್ರತಾಧರ್ಮಕ್ಕೆ ಮೆಚ್ಚಿದ ಯಮನು ಸಾವಿತ್ರಿಯ ಪತಿಯ ಪ್ರಾಣವನ್ನು ಹೊರತು, ಬೇಕಾದ ವರವನ್ನು ಬೇಡು ಎಂದನು. ಸಾವಿತ್ರಿಯ ತನ್ನ ಮಾವನ ಕಣ್ಣುಗಳಿಗೆ, ಮತ್ತೆ ಬೆಳಕನ್ನು ನೀಡುವಂತೆ ವರ ಪಡೆಯುವಳು. ನಂತರ ಮೃತ್ಯುಲೋಕವನ್ನು ದಾಟದೇ ಹಿಂದುರುಗು ಎಂದ ಯಮನಿಗೆ 'ಹಿಂದಿರುಗುವುದು ಸತಿಗೆ ಧರ್ಮವೇ? ಧರ್ಮದಿಂದ ಧರ್ಮವನ್ನು ಗೆಲ್ಲುವನು ಸಾವಿತ್ರಿ ನಾನು' ಎಂದು ಯಮನಿಗೆ ಎಚ್ಚರಿಸುವಳು.

ಯಮನು ಮೃತ್ಯುಲೋಕವನ್ನು ಪ್ರವೇಶಿಸುತ್ತಿರಲು ಸಾವಿತ್ರಿಯೂ ಅವನನ್ನು ಅನುಸರಿಸುವಳು, ಹಿಂದುರುಗಿ ನೋಡಿ ಯಮನು ಸಾವಿತ್ರಿ 'ತಾ ಏಕಿಂತು ಗೋಳಹೊಯ್ಯುವೆ ಎನ್ನ? ಮತ್ತೇಕೆ ಬಂದೆ? ಎನ್ನಲು ಸಾವಿತ್ರಿ ನಾನು ಹೋಗಲು ಬಯಸುತ್ತಿರುವೆನಾದರೂ ನನ್ನ ಮನಸ್ಸು ನನ್ನ ಅನಿಯನನ್ನು ಅನುಸರಿಸುತಿದೆ, ಹೋಗಲೊಲ್ಲದು ಹಿಂದೆ ಮನವನ್ನು ಅನುಸುತಿದೆ ದೇಹ ಮನದ ಧರ್ಮವ ಮನವು ಮಾಡುತಿದೆ. ನನ್ನಾತ್ಮವಾಗಲೇ ನಿನ್ನ ಕೈಯಲ್ಲಿಹುದು, ಪತಿಯಾತ್ಮದರ್ಧ ಸತಿ ಎಂಬುದದು ಋಷಿಸಿದ್ಧ. ಆತ್ಮ ವಿಹಕಡೆ ದೇಹ ಮನಸುಗಳು ಹೋಗುವುದು ಧರ್ಮ!

ಸಾವಿತ್ರಿಯ ಧರ್ಮಕ್ಕೆ ಹಿಗ್ಗಿ ಮೆಚ್ಚಿದ ಯಮನು ನನ್ನ ಕೈಲಿಹ ಜೀವವೊಂದನ್ನು ಬಿಟ್ಟು ಬೇಕಾದ ವರವ ಬೇಡು ಎಂದನು. ಸಾವಿತ್ರಿಯು ತನ್ನ ಮಾವನಿಗೆ ಕಳೆದುಹೋದ ಧರೆ ಸಿರಿಗಳು ಬರಲೆಂದು ಕೇಳಲು ಯಮನು ತಥಾಸ್ತು ಎಂದು ವರವನು ನೀಡಿದನು 'ಜೀವವಿಹ ಮಾನವರು ಬರಬಾರದು ನನ್ನೊಡನೆ ವರವನ್ನು ನೀಡಿರುವೆನು, ಇನ್ನು ನಡೆ ಮುದ್ದುಸುತೆ' ಎಂದು ಹೇಳುವನು. ಆದರೂ ಸಾವಿತ್ರಿ ಆತ್ಮವಿದ್ದೆಡೆ ಮನಸ್ಸು, ದೇಹ ಹಿಂದಿರುಗುವುದೆಂತು ಗೆಲ್ಲುವನು ಧರ್ಮವನ್ನು, ಧರ್ಮದಿಂದ ಧರ್ಮವನ್ನು ಸೋಲಿಸುವನು, ಎಂದೇ ಮತ್ತೆ ಯಮನನ್ನು ಹಿಂಬಾಲಿಸುವಳು ಯಮನು ಸತ್ಯವಾನನ ಪ್ರಾಣದೊಂದಿಗೆ ಯಮಲೋಕಕ್ಕೆ

ಪ್ರವೇಶಿಸುವನು ಮತ್ತೆ ಹಿಂದುರುಗಿ ನೋಡಿ ಸಾವಿತ್ರಿ ಹಿಂಬಾಲಿಸುತ್ತಿರುವುದನ್ನು ಕಂಡು 'ನಾನಿನ್ನು ಸಹಿಸಲಾರೆನು, ದೇವಿ! ಎರಡು ವರಗಳನ್ನು ಇತ್ತೆ, ಮತ್ತೆ ಹಿಂಬಾಲಿಸುವೆ ಪರರ ಪೀಡಿಸುವುದೆಂದು ಧರ್ಮವೇ, ಘನಶೀಲೆ ಸಾವಿತ್ರಿ?' ಎಂದು ಕೇಳಲು 'ಪತಿಯನ್ನು ತ್ಯಜಿಸುವುದು ಸತಿಗೆ ಧರ್ಮವೇ, ಯಮದೇವ? ನಾ ನಿನ್ನ ಅನುಸರಿಸುತ್ತಿಲ್ಲ, ನೀನೆ ಎಳೆದೊಯ್ಯುತಿಹೆ, ನನ್ನ ಪತಿಯಲ್ಲಿಹುದು ನನ್ನಾತ್ಮ! ಧರ್ಮಚ್ಯುತಿಯಿಲ್ಲ ಇದರಲ್ಲಿ' ಎಂದು ಉತ್ತರಿಸುವಳು.

ಯಮನು ಕೋಪೋದ್ರಿಕ್ತನಾಗಿ, 'ನಿನ್ನ ಪತಿ ಸಗ್ಗಕಡರುವ ಬದಲು ನರಕಕಿಳಿದರೆ ನೀನು ಹಿಂದೆ ಹೋಗುವೆಯೇನು?' ಎನ್ನಲು 'ಸಂತಸದಿಂದ ಹೋಗುವನು ಯಮರಾಯ, ಹಿಗ್ಗಿ ಆನಂದದಿಂದ ಅವನ ಗತಿಯನ್ನು ಅಪ್ಪುವೆನು, ಎಲ್ಲಿ ಸತಿ-ಯಿದ್ದರೆ ಅದೇ ಸ್ವರ್ಗ. ಅನುರಾಗವಿದ್ದಲ್ಲಿ ವೈಕುಂಠ ಪ್ರೇಮವೆಲ್ಲರುವುದೋ ಅಲ್ಲಿ ಕೈಲಾಸ, ಎದೆಯಲ್ಮೆ ಎಲ್ಲಿಹುದೂ, ಅಲ್ಲಿಹುದು ಮುಕ್ತಿ ನಾಶವೆಂದರೇನು? ನರಕವಿನಲೇನು? ನಾಕನರಕಗಳಿಗಿಂತ ಸೃಜಿಸಬಲ್ಲದು ಮನಸು'.

ಸಾವಿತ್ರಿಯ ಪತವ್ರತಾಧರ್ಮಕ್ಕೆ ಮೆಚ್ಚಿ ಸಂಪೂರ್ಣ ಶರಣಾದ ಯಮದೇವನು, ವರವನ್ನು ನೀಡುತ್ತೇನೆ ಆದರೆ ಮರೆಯದಿರು ಸತ್ತಜೀವವು ಮತ್ತೆ ಬರುವುದಿಲ್ಲವೆಂದು ಎನ್ನಲು ಸಾವಿತ್ರಿಯು ಮೆಚ್ಚಿ ವರವೀಯುವಡೆ; ಹೇಧರ್ಮದೇವಾ ನನ್ನ ಮಾವನ ವಂಶ ಹಾಳಾಗದಿರಲಿ ಅವನ ನೆಲ ಸತ್ಯವಾನನಸುತರ ಕೈಸೇರಲಿ ಎಂದು ಬೇಡುವನು ನೀಡು ಎನಗೆ ವರವ! ಎಂದು ಕೇಳುವಳು.

ಯಮನು ನಗುತ್ತಾ ತಥಾಸ್ತು! ಎಂದನು. ನಿನ್ನ ಒಲುಮ ಮೃತ್ಯುವನು ಜಯಿಸಿತು. ಧರ್ಮ ಒಲವಿಗೆ ಮಣಿದು ಶರಣಾಯಿತು. ನಿಯಮವು ರಾಗಕ್ಕೆ ಮೈಸೋತಿತು. ಮೃತ್ಯುವನ್ನು ಎದೆಯೊಲವು ಗೆದ್ದಿತು ನಿನ್ನ ಅನಿಯನನ್ನು ನಿನಗೆ ಕೊಟ್ಟಿಹೆನು. ತೆರಳು ಸುಖವಾಗಿ ಬಾಳು, ನಿನ್ನಂತೆ ಮುಂದೆ ಯಾರೂ, ಹಿಂದೆಯೂ ಯಾರೂ ಒಲಿದಿಲ್ಲ, ನಿನ್ನ ಪ್ರೇಮದ ಮುಂದೆ ನನ್ನ ಶಕ್ತಿ ಜಳ್ಳು ಎಂದು ಹರಸಿ ಕಳುಹಿಸಿದನು. ಇಲ್ಲಿ ಧರ್ಮ ಸೋಲಿಗೆ ತಾರ್ಕಿಕವಾಗಿ ಯಾವುದೇ ಸ್ಪಷ್ಟ ಕಾರಣ ನೀಡಲು ಸಾಧ್ಯವಾಗದಿದ್ದರೂ ಪ್ರೀತಿ ಪ್ರೇಮ ಇವುಗಳಿಂದ ಸಾವನ್ನು ಗೆಲ್ಲಬಹುದು, ಅವು ಅಮರ ಎಂಬುವುದನ್ನು ನಾಟಕ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ.[೧] ಹೀಗೆ ಸಾವಿತ್ರಿಯು ತನ್ನ ಪತಿಯ ಪುನರ್‌ಜನ್ಮದಿಂದ ಹೊಸ ಬಾಳನ್ನು ಅರಸಿ ಸುಖಸಂತೋಷದಿಂದ ಬಾಳುವಳು, ಹೀಗೆ ಸಾವಿತ್ರಿ ಕಥೆಯ ಮೂಲಕ ಕುವೆಂಪು

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ – ಸಂಪಾದಕರು: ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೧

ಅಮರ ಪ್ರೇಮದ ವಿಜಯವನ್ನು ಸಾರಿದ್ದಾರೆ. (ಲಿಂಗದೇವರು ಹಳೆಮನಿ- ಕುವೆಂಪು ನಾಟಕಗಳ ಹಿನ್ನೋಟ) ಯಮನ ಸೋಲು ನಾಟಕದಲ್ಲಿ ವಸ್ತುವಿಗೆ ತಕ್ಕದಾದ ಭಾಷೆ, ತಂತ್ರಗಳೇ ಕ್ರಿಯೆಯನ್ನು ಸಾವದಾನವಾಗಿ ನಡೆಸಿಕೊಂಡು ಹೋಗುತ್ತವೆ. ನಾಟಕದಲ್ಲಿರುವ ಸಂಪ್ರದಾಯತೆಯನ್ನು ಸರಿದೂಗಿಸಿ ಅವನ್ನು ಪ್ರಮಾಣೀಕರಿಸುತ್ತವೆ.[೧]

**ಮೂಲಕಥೆ:** ಯಮನ ಸೋಲು ನಾಟಕದ ಮೂಲವಿರುವುದು ವ್ಯಾಸಭಾರತದಲ್ಲಿ ಬರುವ ಒಂದು ಉಪಖ್ಯಾನ. ಇಲ್ಲಿ ಮೃತ್ಯುವೇ ಪ್ರಧಾನವಾದ ಪಾತ್ರ. ಸಾವಿತ್ರಿಯು ಅಶ್ವಪತಿಯೆಂಬ ರಾಜನ ಮಗಳು. ಇವಳು ಈಶ್ವರನ ವರ ಪ್ರಸಾದದಿಂದ ಜನಿಸಿದ್ದಳು. ಸೌಂದರ್ಯದಲ್ಲಿ ಈಕೆಯನ್ನು ಮೀರಿಸುವವರು ಯಾರೂ ಜಗತ್ತಿನಲ್ಲಿ ಇರಲಿಲ್ಲ. ಪಾತಿವ್ರತ್ಯದೊಳಗೆ ಈಕೆ ಅಗ್ರಗಣ್ಯ. ಇವಳು ಪ್ರಾಪ್ತವಯಸ್ಸಿಗೆ ಬಂದ ಮೇಲೆ ಇವಳಿಗೆ ಅನುರೂಪವಾದ ವರನನ್ನು ಹುಡುಕುವಲ್ಲಿ ಅಶ್ವಪತಿಯು ಸೋತನು.

ಒಂದು ದಿನ ಸಾವಿತ್ರಿ ತಂದೆಯೊಡನೆ ತನಗೆ ತಕ್ಕನಾದ ಪತಿಯನ್ನು ತಾನೇ ಹುಡುಕಿಕೊಳ್ಳುವೆ ಎಂದು ಭಿನ್ನವಿಸಿದಾಗ ಅದಕ್ಕೆ ಒಪ್ಪಿಗೆಯನ್ನು ನೀಡುವನು. ಸಾವಿತ್ರಿಯು ದೇಶ-ದೇಶವನ್ನು ಸಂಚರಿಸಿದರೂ ಅವಳಿಗೆ ಅರ್ಹನಾದ ವರನು ಸಿಗಲಿಲ್ಲ. ಕೊನೆಗೆ ನಿರಾಶಳಾಗಿ ಋಷಿಯ ಆಶ್ರಮಕ್ಕೆ ಬಂದಳು. ಅಲ್ಲಿ ದ್ಯುಮತ್ಸೇನನ ಮಗನಾದ ಸತ್ಯವಾನನು ಶತ್ರುಗಳಿಂದ ರಾಜ್ಯವನ್ನು ಕಳೆದುಕೊಂಡು ಕುರುಡನಾಗಿ ಕಾನನದಲ್ಲಿ ಋಷಿಯ ಆಶ್ರಯವನ್ನು ಪಡೆದಿದ್ದನು. ಸತ್ಯವಾನನು ಸುಂದರನೂ, ಯೌವನಭರಿತನೂ ಆಗಿದ್ದರೂ ಇದಾವುದೂ ಸಾವಿತ್ರಿಯನ್ನು ಆಕರ್ಷಿಸಿದೆ, ಆತನಲ್ಲಿದ್ದ ಶುಚಿಶೀಲಕ್ಕೆ ಮನಸೋತು, ಅವನಿಗೆ ಮನಸ್ಸನ್ನು ನೀಡಿ, ಅವನು ಅಲ್ಪಾಯು ಎಂದು ತಿಳಿದೂ ವರಿಸಿದಳು.

ಸತ್ಯವಾನನ ಕಡೆಯ ದಿನಗಳು ಹತ್ತಿರವಾದವು ಎಂದು ತಿಳಿದು ಸಾವಿತ್ರಿ ಶಿವನಾರಾಧನೆಯನ್ನು ಮಾಡುವಳು. ದಿನವೂ ಪರಮೇಶ್ವರನ ಬೇಡುವಳು. ಸತ್ಯವಾನನ ಕೊನೆಯದಿನದಂದು ಹತ್ತಿರವಾದಂತೆ ಯಮನು ಅವನ ಪ್ರಾಣವನ್ನು ತೆಗೆದುಕೊಂಡು ಹೋಗಲು, ಆಕೆಯೂ ತನ್ನ ಪತಿಯನ್ನನುಸರಿಸಿ, ಸತಿಧರ್ಮ, ಪಾವಿತ್ರ್ಯ ಧರ್ಮವನ್ನು ಪತಿವ್ರತೆಯ ಧರ್ಮವನ್ನು ಪಾಲಿಸುತ್ತಾ ಹೋಗುವಳು, ಇವಳ ಪತಿವ್ರತಾಧರ್ಮಕ್ಕೆ ಸೋತ ಯಮಧರ್ಮನು ಮೂರು ವರಗಳನ್ನು ಕರುಣಿಸುವುದರ ಜೊತೆಗೆ ಸಾವಿತ್ರಿಯನ್ನು ಆಶೀರ್ವದಿಸಿ ಆಕೆಯ ಹೆಸರು ಜಗಕ್ಕೆ ಶಕ್ತಿದಾಯಕವಾಗಿ ರಾರಾಜಿಸಲಿ ಎಂದು ಹರಸಿ ಕಳುಹಿಸಿದನು. ಹೀಗೆ ಸಾವಿತ್ರಿಯು ತನ್ನ ಪತಿವ್ರತಾ ಧರ್ಮದಿಂದಾಗಿ

---

೧. ಹೆಚ್.ಎಸ್.ರಾಮಚಂದ್ರೇಗೌಡ, ರಸಪ್ರತಿಪಾದನೆ, ಕುವೆಂಪು ನಾಟಕ ವಿಹಾರ-ದೇಜಗೌ, ಸಹ್ಯಾದ್ರಿ ಪ್ರಕಾಶನ, ೧೯೭೭

ಮತ್ತು ಶುಚಿ ಪ್ರೇಮಾತ್ಮದಿಂದಾಗಿ ತನ್ನ ಪತಿಯ ಪ್ರಾಣವನ್ನೂ, ತನ್ನ ಮಾವನ ಕಳೆದುಹೋದ ಕಣ್ಣುಗಳನ್ನೂ, ರಾಜ್ಯ ಅಧಿಕಾರಗಳನ್ನೂ, ಮರಳಿ ಪಡೆದಳು.

**ಯಮನ ಸೋಲು ನಾಟಕದ ಬದಲಾವಣೆಯ ಅಂಶಗಳು**

ಕುವೆಂಪು ನಾಟಕದ ಆರಂಭದಲ್ಲಿ ಯುಕ್ಷ ಮತ್ತು ಯಮದೂತರ ಸಂವಾದ ಸಾವಿತ್ರಿ ಕಥೆಗೆ ಅಗತ್ಯವಾದ ಹಿನ್ನೆಲೆಯನ್ನು ಒದಗಿಸಿದ್ದಾರೆ. ಯಕ್ಷ ಮತ್ತು ಯಮ ದೂತರು ಪರಸ್ಪರ ಎದುರುಗೊಂಡ ನಂತರ, ಯಕ್ಷನು ಸಾವಿತ್ರಿಯ ಕಥೆಯನ್ನು ಕೇಳಲು ಆಸಕ್ತನಾಗಿ ಯಮದೂತನು ಸಾವಿತ್ರಿ ಸತ್ಯವಾನರ ಕಥೆಯನ್ನು ಹೇಳುತ್ತಾನೆ. ಸಾವಿತ್ರಿಯು ಸತ್ಯವಾನನ್ನು ವರಿಸಿದ ಸನ್ನಿವೇಶ ಆಕೆಯ ಪಾತಿವ್ರತೆ ಮುಂತಾದವು ಆರಂಭದ ದೃಶ್ಯಗಳನ್ನು ಬದಲಾವಣೆ ಮಾಡಿದ್ದಾರೆ.

ಸಾವಿತ್ರಿಯು ಸತ್ಯವಾನನ ಯೌವನಕ್ಕೂ, ಸೌಂದರ್ಯಕ್ಕೂ ಮನಸೋಲದೆ, ಅವನಲ್ಲಿದ್ದ ಶುಚಿಶೀಲಕ್ಕೆ ಮನಸೋತು ಅವನು ಅಲ್ಪಾಯು ಎಂದು ತಿಳಿದಿದ್ದರೂ ವರಿಸಿದಳು. ಇವು ಕುವೆಂಪುರವರು ನಾಟಕದಲ್ಲಿ ಸಾವಿತ್ರಿಯು ಗುಣಕ್ಕೆ ಬೆಲೆ ಕೊಡುವಳೇ ವಿನಃ ಸೌಂದರ್ಯಕಲ್ಲ ಎಂಬುದನ್ನೂ, ಅವಳ ಖಚಿತ ತೀರ್ಮಾನ, ನಿರ್ಧಾರಿತ ಶಕ್ತಿ, ಧೈರ್ಯಗಳನ್ನು ಅನಾವರಣಗೊಳಿಸಿದ್ದಾರೆ.

ಸತ್ಯವಾನ–ಸಾವಿತ್ರಿಯ ಪ್ರೀತಿಯ ಸಂಬಂಧವನ್ನು ಕುವೆಂಪು ಮೃತ್ಯುವನ್ನು ಮುಂದಿಟ್ಟುಕೊಂಡು ಸೊಗಸಾಗಿ ಚಿತ್ರಿಸಿದ್ದಾರೆ. ಸಾವಿತ್ರಿಯ ಆತಂಕಬೆರತ ಪ್ರೀತಿ, ಸತ್ಯವಾನನ ಶುದ್ಧಮನಸ್ಸು ಮುಖಾಮುಖಿಯಾಗುತ್ತವೆ. ಮುತ್ತುಗದ ಹೂಗಳು ಸತ್ಯವಾನನಿಗೆ ಪಂಜುಗಳಂತೆ ಕಂಡುಬಂದರೆ, ಸಾವಿತ್ರಿಗೆ ಅದೇ ಮುತ್ತುಗದ ಹೂಗಳು 'ಬಹುದೂರು ಮಸಣದೊಳು ಉರಿವ ಸೂಡುಗಳಂತೆ' ಕಂಡುಬರುತ್ತವೆ.

ಯಮನ ಸಾವಿತ್ರಿಯ ಬಳಿ ಒಂದು ಸತ್ಯವಾನನ ಪ್ರಾಣ ತೆಗೆದುಕೊಂಡು ಹೋಗಲು ದಯಮಾಡಿ ಸಹಕರಿಸು, ದೂರಸರಿ ತಾಯೆ, ನಿನ್ನ ಹತ್ತಿರ ಬರಲಾಗುತ್ತಿಲ್ಲ, ನಿನ್ನ ಪತಿವ್ರತಾಧರ್ಮ ನನ್ನನ್ನು ಸುಡುತ್ತದೆ ಎಂದು ಹೇಳಿದಾಗ ಕುವೆಂಪುರವರು ಸಾವಿತ್ರಿಯ ಬಾಯಿಂದ ಪ್ರೇಮಾನುರಾಗದ ಧರ್ಮವು ಎಲ್ಲವನ್ನೂ ಮೀರುವಂತೆ ಮಾಡುತ್ತದೆಂದೂ, ಸರ್ವವನ್ನೂ ಮೀರಿರುವ ಧರ್ಮವಿರುವುದೆಂದೂ, ಎದೆಯೊಲವು ಋತುನಿಯಮಕ್ಕೆ ಅತೀತವೆಂದೂ, ಪ್ರೇಮ ಧರ್ಮವನ್ನು ಯಮನಿಗೆ ಸವಾಲೆಸೆದು ಅದರಲ್ಲಿ ಸಾವಿತ್ರಿ ಯಶಸ್ವಿಯಾಗುವಂತೆ ಮಾಡಿದ್ದಾರೆ.

ಮುಂದೆ ಯಮಧರ್ಮನು ಸಾವಿತ್ರಿಯ ಪ್ರೇಮನಿಷ್ಠೆಯ ಎದುರು ತಲೆ–ಬಾಗುತ್ತಾನೆ. 'ನಿನ್ನ ಪ್ರೇಮದ ಮುಂದೆ ನನ್ನ ಶಕ್ತಿಯು ಜಳ್ಳು' ಎಂದು ಹೇಳಿ

ಸಾವಿತ್ರಿಯ ಹೆಸರು ಅಜರಾಮರವಾಗುವಂತೆ ಆಶೀರ್ವದಿಸುತ್ತಾನೆ. ಹಾಗೂ ಆಕೆಗೆ ಪತಿಭಿಕ್ಷೆಯನ್ನು ನೀಡಿ ಕಳುಹಿಸುವನು.

ನಾಟಕದ ಕೊನೆಯಲ್ಲಿ ಕುವೆಂಪು ಉಪಸಂಹಾರವೆಂಬುದನ್ನು ಸೇರಿಸಿ ಅಲ್ಲಿ ಯಮನಸೋಲನ್ನು ಅವಮಾನಕರವಲ್ಲ ಎಂದೂ ಅಪಮಾನವಲ್ಲವೆಂದೂ, ಅದು ಕೀರ್ತಿಕರ ಎಂದು ಯಕ್ಷನು ಯಮನನ್ನು ಅವನ ಕಾರ್ಯವನ್ನು ಸಮರ್ಥಿಸುವ ಪ್ರಯತ್ನ ಮಾಡಿದ್ದಾರೆ.

**ಬದಲಾವಣೆಯ ಪ್ರಸಂಗಗಳು:** 'ಯಮನಸೋಲು' ನಾಟಕದ ಕಥಾನಾಯಕಿ ಸಾವಿತ್ರಿ, ಇಲ್ಲಿ ಕುವೆಂಪು ಮೂಲಕಥೆಯಾದ ಸಾವಿತ್ರಿಯ ಪಾತಿವ್ರತ ಭಕ್ತಿಯನ್ನು ಯಮನಿಗೆ ಉಂಟಾದ ಸೋಲು ಎಂದಿದ್ದು ಮೂಲಕಥೆಗಿಂತ ವೈವಿಧ್ಯಮಯವಾದ ಬದಲಾವಣೆಯನ್ನು ತಂದಿದ್ದಾರೆ.

ನಾಟಕದ ಆರಂಭದಲ್ಲಿ ಯಕ್ಷ ಮತ್ತು ಯಮದೂತರ ಪಾತ್ರಗಳನ್ನು ಸೃಷ್ಟಿಮಾಡಿ ಯಮದೂತನಿಂದಲೇ ಸಾವಿತ್ರಿಯ ಕಥೆಯನ್ನು ಪ್ರಾರಂಭಿಸಿದ್ದಾರೆ. ಪ್ರಾಣವನ್ನು ಕೊಂಡೊಯ್ಯಬೇಕಾದ ದೂತನಿಂದಲೇ ಸಾವಿತ್ರಿ ಸತ್ಯವಾನರ ಕಥೆಯನ್ನು ಹೇಳಿಸಿರುವುದು ಕುವೆಂಪುರವರ ನಾಟಕ ಪ್ರತಿಭೆಗೆ ಸಾಕ್ಷಿ.

**ಯಕ್ಷ** : ಗಾಳಿವಟ್ಟೆಯೊಳಿಂತು ವೇಗದಿಂದೋಡುತಿಹೆ ಯಾವೆಡೆಗೆ, ಯಮದೂತ?

**ದೂತ** : ನೀರ ನೀರೆಯರಾದ ಸತ್ಯವಾನ್ ಸಾವಿತ್ರಿ ಇವರಿರುವ ವನದಡೆಗೆ

**ಯಕ್ಷ** : ವಿಶೇಷವೇನಲ್ಲಿ

**ದೂತ** : ಸತ್ಯವಾನನಿಗಿದೇ ಚರಮದಿನ, ನಮ್ಮ ರಾಯನ ಬಳಿ ಕೊಂಡೊಯ್ಯ
ಲಾತನನು ತೆರಳುತಿಹೆ, ಯಕ್ಷ

**ಯಕ್ಷ** : ಅವನೇನು ಮುದುಕನೇ?

**ದೂತ** : ಇಲ್ಲ ಯುವಕನೆ! ಮದುವೆಯಾಗಿನ್ನು ಹನ್ನೆರಡು ತಿಂಗಳೂ ಕಳೆದಿಲ್ಲ

**ಯಕ್ಷ** : ಹಾಗಾದರೀ ಗತಿಯ ಸಾವಿತ್ರಿಯರಿತಿಹಳೆ?

**ದೂತ** : ಚೆನ್ನಾಗಿ! ಚೆನ್ನಾಗಿ!

**ಯಕ್ಷ** : ಯಾರಾಕೆ? ಇಂತೇತಕೆಸಗಿದಳು? ತಿಳಿದೂ ಸಾವನೇರಪ್ಪಿದಳು? ತಿಳಿಸು
ಯಮಕಿಂಕರಾ

**ದೂತ** : ವಿಶದವಾಗುಸುರಲೆನಗೀಗ ಹೊತ್ತಿಲ್ಲ ತಡೆಮಾಡಿದರೆ ಯಮನ ದಂಡನೆಗೆ
ಗುರಿಯಾಗಬೇಕು.

ಸಂಕ್ಷೇಪವಾಗೊರೆಯುವನು ಕೇಳು:

**ದೂತ** : ಸಾವಿತ್ರಿ ಅಶ್ವಪತಿಯೆಂಬ ರಾಜಕುವರಿ ಭಕ್ತಿಯಿಂ

ದೀಶನಾರಾಧನೆಯ ಮಾಡೆ ಜನಿಸಿದಳು
ಬ್ರಹ್ಮಸೃಷ್ಟಿಯೊಳೀಗ ಅ ಸತಿಯ ಸೊಬಗಿನಲಿ
ಮೀರುವವರಾರಿಲ್ಲ ಪಾತಿವ್ರತೆದೊಳವಳ
ಎಣೆಯಿಲ್ಲ ಪ್ರಾಪ್ತ ವಯಸಾಗಲಾಕೆಗೆ, ದೊರೆಯು
ಅನುರೂಪನಾದ ವರನನೆಲ್ಲಿಯು ಹುಡುಕಿ
ಕಾಣದೆಯೆ, ತನ್ನ ಪತಿಯನ್ನು ತಾನೆ ಒಲಿದರಸಿ
ತರುವಂತೆ ಬಿನ್ನವಿಸಿಯಾಕೆಯಂ ಕಳುಹಿದನು
ದೇಶದೇಶವ ಚರಿಸಿ ತನಗೆ ಅನುರೂಪನಂ
ಎಲ್ಲಿಯೂ ಕಾಣದಿರೆ ಕಡೆಗಾರೆಯ್ಯೆತಂದ
ಳೊಂದು ಋಷ್ಯಾಶ್ರಮಕೆ, ಅಲ್ಲಿ ಶತ್ರುಗಳು
ರಾಜ್ಯವನ್ನಪಹರಸೆ, ಕುರುಡಾಗಿ ಕಾನನಕೆ
ಬಂದು ಋಷಿ ಚರ್ಯೆಯಲ್ಲಿರುವ ರಾಜರ್ಷಿ
ದ್ಯುಮತ್ಸೇನ ಭೂಮಿಪನ ಸುತನಾದ ಸತ್ಯವಾನ್
ಎಂಬ ಶುದ್ಧಾತ್ಮನನ್ನೊಲಿದು ವರಿಸಿದಳು

ನಾಟಕದ ಪೀಠಿಕಾರಂಭದಲ್ಲೇ ಯಕ್ಷ-ದೂತರ ನಡುವಿನ ಸಂವಾದದಲ್ಲೇ ಸಾವಿತ್ರಿಕಥೆಯ ಪೂರ್ಣ ರೂಪ ದೊರಕುವಂತೆ ಮಾಡಿದ್ದಾರೆ.

ಸತ್ಯವಾನನ ಕಡೆಯ ದಿನದಂದು ಸಾವಿತ್ರಿಯು ಪ್ರಕೃತಿಯ ಚಲನೆಯನ್ನೇ ಸ್ತಬ್ಧವಾಗುವಂತೆ ಬೇಡಿಕೊಳ್ಳುವಳು. ಈ ಸ್ತಬ್ಧತೆಯಿಂದ ತನ್ನ ಪತಿಯ ಪ್ರಾಣವನ್ನು ರಕ್ಷಿಸಲು ಸಾಧ್ಯವೆಂಬ ಕಲ್ಪನಾಭ್ರಾಂತಿಯಲ್ಲಿದ್ದಾಳೆ.

ಸಾವಿತ್ರಿ : ಏಳದಿರು, ಎಲೆ ಸೂರ್ಯ, ಏಳದಿರು ಇಂದು
ಮುಂದ ಎಂದದಿಗೂ ಮುಳುಗಲೆಂದೇಕೆ
ಉದಯಿಸುವೆ ಇಂದು? ಕಾಲಚಕ್ರವೇ ನಿಲ್ಲು
ಮುಂದೆ ಎಂದೆಂದಿಗೂ ನಿಲ್ಲಲೆಂದೇಕೆ
ತಿರುಗುತಿಹೆ ನೀನು? ಸೃಷ್ಟಿಯೇ ನಿಲ್ಲಿಲ್ಲಿ
ಸಾಗದಿರು ಮುಂದೆ; ಹತ್ತಿರದೊಳಿದೆ ವಿಲಯ!
ಎಲೆ ಭಯಂಕರ ದಿನವೆ, ಸೃಷ್ಟಿ ಜಾಲದ ಬಿಟ್ಟು ನನಗಾಗಿ
ಕಳ್ಳನೊಲು ಜಾರಬಾರದೆ, ಹಾರಿಹೋಗಬಾರದೇ ನೀನು!
ಚುಕ್ಕಿಗಳೇ ತೆರಳಬೇಡಿರಿ, ಚಂದ್ರ ಮರೆಯಾಗಬೇಡ
ಕೋಗಿಲೆಯೆ ಕೂಗದಿರು ಕೂಗಿ ಜವಗಂಟೆಯಂ

ಬಡಿಯದಿರು ನೆನಪ ಕೊಡದಿರು ಜವಗೆ, ಇಂದು ಆ
ದುರ್ದಿವಸವೆಂದು! ವಿಸ್ಮೃತಿಯೆ ಜವನ
ಆವರಿಸು ಹೋಗು
ಬೀಸದಿರು, ಮಾರುತನೆ; ಎನಗಾಗಿ ಬೀಸದಿರು
ಕೈಮುಗಿದು ಬೇಡುವೆನು.

ಎಂದು ಸಾವಿತ್ರಿಯು ಪ್ರಕೃತಿಯ- ಸೂರ್ಯ, ಚಂದ್ರ, ಚುಕ್ಕಿ, ಮಾರುತ, ಕೋಗಿಲೆ ಕೂಗು... ಸೃಷ್ಟಿಯ ಚರಾಚರ ವಸ್ತುಗಳಲ್ಲಿ ನಿಶ್ಚಲವಾಗುವಂತೆ ಕೈಮುಗಿದು ಪ್ರಾರ್ಥಿಸುವಳು.

ಸಾವಿತ್ರಿಗೆ ತನ್ನ ಪತಿಯ ಕೊನೆಯದಿನ ಹತ್ತಿರವಾಗುವಂತಹ ಸಮಯದಲ್ಲಿ ಸತಿಪತಿಯರಿಬ್ಬರೂ ಈಶ್ವರನ ಆರಾಧನೆಯನ್ನು ಮಾಡುವರು. ನಾಳೆ ಪೂಜಿಸಲಾರೆ ನೀನು; ಇದೆ ನಿನ್ನ ಕಡೆಯ ಪೂಜೆ, ಎಂದು ಮನಸ್ಸಿನಲ್ಲೇ ಹೇಳಿಕೊಳ್ಳುತ್ತಾ ಸತ್ಯವನ್ನು ಹೊರಗೆಡುವದೇ ಕೊರಗುವಳು, ನಂತರ ತನ್ನ ಪತಿಯನ್ನನುಸರಿಸಿಯೇ ತಾನೂ ಕಾಡಿಗೆ ಪುಷ್ಪವನ್ನಾರಿಸುವುದಕ್ಕೆ ಬರುವೆನೆಂದು ತೆರಳುವಳು. ಕಾಡಿನಲ್ಲಿ ಮುತ್ತುಗದ ಮರದ ಹೂಗಳು ಸತ್ಯವಾನನಿಗೆ ಪ್ರಕೃತಿಯ ಸ್ವಾಗತಕ್ಕೆ ಹಿಡಿದಿರುವ ಬೆಳಕಿನ ಪಂಜಿನಂತೆ ಕಂಡುಬಂದರೆ ಸಾವಿತ್ರಿಗೆ ಸಾವಿನದ್ದೆ ಚಿಂತೆಯಾದ್ದರಿಂದ ದೂರದಲ್ಲಿ ಸುಡುವ ಸೂಡುಗಳಂತೆ ಕಂಡುಬರುತ್ತದೆ. ಇದು ಕುವೆಂಪುರವರು ಒಂದೇ ನೋಟದಲ್ಲಿ ಚಿತ್ರಿಸುತ್ತಿರುವ ಎರಡು ಭಾವನೆಗಳ ತಾಕಲಾಟದ ಸನ್ನಿವೇಶವಾಗಿದೆ. ಕಾಡಿನಲ್ಲಿ ಪತಿಯೊಡನೆ ಸಾಗುತ್ತಿದ್ದ ಸಾವಿತ್ರಿಗೆ ಸತ್ಯವಾನನು ಹುಲಿಯಿಂದ ಬಲಿಯಾಗಬೇಕಾಗಿದ್ದ ಜಿಂಕೆಯನ್ನು, ಉರಗದಿಂದ ಕೋಗಿಲೆಯನ್ನು ಪಾರು ಮಾಡಿದೆನೆಂದು ಹೇಳುವನು. 'ಆ ಪುಣ್ಯ ನಿನ್ನನೀ ದಿನ ಬಂದು ರಕ್ಷಿಸಲಿ' ಎಂದು ತನ್ನ ಪ್ರಿಯತಮನನ್ನು ಮನದಲ್ಲೇ ಹರಸುವಳು. ಮುಂದೆ ಸಾಗುತ್ತಿದ್ದಾಗ ಸತ್ಯವಾನನಿಗೆ ತಲೆನೋವು ಹೆಚ್ಚಾಗಿ,

'ತಲೆನೋವು ಹೆಚ್ಚುತ್ತಲಿದೆ ರಮಣಿ, ಮಲಗುವಂ
ತಾಗುತಿದೆ ಒರಗಿಕೊಳ್ಳುವೆ ಸ್ವಲ್ಪ' ಸಾವಿತ್ರಿ ಎಂದು

ಸಾವಿತ್ರಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದನು. ಸಾವಿತ್ರಿ ತನ್ನ ಮನಸ್ಸಿನಲ್ಲಿ 'ಜವನಿದ್ದೆಯಾಗಿದಿರಲೀ ನಿದ್ದೇ!' ಎಂದು ಹರಸುವಳು.

ಈ ವೇಳೆಗಾಗಲೇ ಯಕ್ಷನು ಸಾವಿತ್ರಿಯ ಪಾತಿವ್ರತಜ್ವಾಲೆಗೆ ಸಿಕ್ಕಿ ಬೆಂದು, ನೊಂದು, ತರಗಲೆಯಂತಾಗಿ, ಯಮದೂತನ ಬಳಿ ತೆರಳುವನು. ಅವನ ಮಾತಿನಿಂದ ಸಾವಿತ್ರಿಯ ಹದಿಬದೆಯ ಶಕಿಯು ಅರಿವಾಗುತ್ತದೆ.

ನನ್ನಿಂದ ಸಾಧ್ಯ! ನನ್ನಿಂದ ಸಾಧ್ಯವದು
ಯಕ್ಷ ಬಿರುಗಾಳಿಯಲಿ ಸಿಕ್ಕಿ ತೂರಾಡುವಾ
ತರಗಲೆಯ ತೆರನಾದ ಹದಿಬದೆಯ ಜ್ವಾಲೆಯೊಳು
ಸಿಕ್ಕಿ! ಸಾಕಪ್ಪ! ಸಾಕಿನ್ನೂ! ಜೀವರನೆನಿತೊ
ಕೊಂಡೊಯ್ದನಾದರೂ ಈ ಪರಿಯ ಜೀವರನು
ಕಂಡಿಲ್ಲ ಸಾಕಪ್ಪ. ಸಾಕಿನ್ನು!

ಈ ಮಾತುಗಳಿಂದ ದೂತನು ಪ್ರಾಣ ಹರಣ ಕರ್ತವ್ಯದಲ್ಲಿ ನೊಂದಿರುವ ಪರಿ ಗೊತ್ತಾಗುತ್ತದೆ. ದೂತನು ಯಮಪುರಿಗೆ ತೆರಳಿ ಯಮಧರ್ಮನಿಗೆ ನಡೆದ ಘಟನೆಯನ್ನು ತಿಳಿಸಿ ತನ್ನಿಂದ ಅಸಾಧ್ಯವೆಂದೂ ಅರುಹಿ ಯಮಧರ್ಮನನ್ನು ಕಳುಹಿಸಿದನು. ಯಮಧರ್ಮನು ಸಾವಿತ್ರಿಯ ಬಳಿ ನಿಂತು ಆಕೆಯನ್ನು ಬೇಡುವುದು ಸೃಷ್ಟಿಯ ವೈಪರೀತ್ಯಕ್ಕೆ ಸಾಕ್ಷಿ ಇದನ್ನು ಕುವೆಂಪು ಸಾಧಿಸಿದ್ದಾರೆ. ಶ್ರೀರಾಮ, ಶ್ರೀಕೃಷ್ಣ, ವಾಲ್ಮೀಕಿ ಮೊದಲಾದವರ ಪ್ರಾಣದಲ್ಲಿ ಎಳ್ಳಷ್ಟು ತ್ರಾಸವಾಗದ ಯಮನಿಗೆ ಸಾವಿತ್ರಿಯು ಸತ್ಯವಾವಾನನ ಪ್ರಾಣಹರಣಕ್ಕೆ ಅವನಿಗೇ ಯಮಪಾಶವಾಗುತ್ತಾಳೆ. ಪಾರವಾಗಿರುತ್ತಾಳೆ. ಯಮನೇ ಸಾವಿತ್ರಿಯನ್ನು ಬೇಡುವ ಪರಿ ಈ ರೀತಿ ಇದೆ.

ಯಮ:

ಧರ್ಮವರಿತವಳು ನೀನೆಲೆ ತಾಯೆ, ಸಾವಿತ್ರಿ
ವಿಶ್ವಧರ್ಮಕ್ಕೆ ಎರಡು ನಾಲಗೆಗಳಿಲ್ಲ
ವಿಶ್ವನಿಯಮಚ್ಯುತಿಯೆ ವಿಶ್ವನಾಶಕೆ ಹೇತು!
ದೂರಸರಿ; ಬಿಡು ತಾಯೆ ವಿನಯದಿಂದೊರೆಯುವನು!

ಆದರೂ ಸಾವಿತ್ರಿ ಯಮನನ್ನೇ ತನ್ನ ಕಠೋರ ನಿಯಮವನ್ನು ಅವಳ ಮೇಲಿನ ಕರುಣೆಯಿಂದ ಸಡಿಲಿಸುವಂತೆ ಪ್ರಾರ್ಥಿಸುವಳು. ಕೊನೆಗೆ ಯಮನಿಗೆ

ಧರ್ಮ ಕೊಲವನು ಶರಣು ಮಾಡುವನು, ಯಮದೇವ.
ಅದರಿನ್ನೊಂದು ನಾ ಕೇಳುವೆನು, ಧರ್ಮವೊಲವಿಗೆ ಶರಣು
ಎಂದು ನೀನರಿತಾಗ ನನ್ನನಿಯನನ್ನನಗೆ
ಹಿಂದಕೊಪ್ಪಿಸಬೇಕು ನಿನ್ನಾಜ್ಞೆಯಂತಿಗೋ
..............................................
ನಿಲ್ಲುವೆನು ದೂರ ಸರಿದು

ಎಂದು ಷರತ್ತನ್ನು ವಿಧಿಸಿ ದೂರ ನಿಲ್ಲುವಳು. ಯಮನು ಸತ್ಯವಾನನ ಪ್ರಾಣವನ್ನು ತೆಗೆದುಕೊಂಡು ಹೋಗುವನು ಸಾವಿತ್ರಿ ಯಮನನ್ನು ಹಿಂಬಾಲಿಸುತ್ತಾ ಹೋಗುವಳು. ಸಾವಿತ್ರಿ ಹಿಂದೆ ಬರುವುದನ್ನು ಪ್ರಶ್ನಿಸಿದ ಯಮನಿಗೆ ಸಾವಿತ್ರಿಯು ಹೀಗೆನ್ನುವಳು.

ನಿನನಾನನುಸರಿಸಿ ಬರುತಿಲ್ಲ, ಯಮದೇವ
ಪತಿಯನನುಸರಿಸಿ ಬರುತಿಹೆನು, ಹುಟ್ಟಿದವರೆಲ್ಲರೂ
ಸಾಯುವುದು ಧರ್ಮವೆಂದೊರೆದೆ
ಅಂತೆಯೇ ಸತ್ತ ಪತಿಯರ ಹಿಂದೆ ಹೋಗುವುದು
ಪತಿವ್ರತಾ ರಮಣೀಯರ ಧರ್ಮ!

ಎಂದು ಯಮಧರ್ಮನಿಗೆ ಹೇಳಿ ನಿನ್ನ ಧರ್ಮವ ನೀನು ಮಾಡು ನನ್ನ ಧರ್ಮವ ನಾನು ಮಾಡುವೆನು ಎಂದು ಹಿಂಬಾಲಿಸಿದಳು. ಇದರಿಂದ ಹರ್ಷಿತನಾದ ಯಮನು ಸಾವಿತ್ರಿಯ ಪತಿಭಕ್ತಿಯನ್ನು ಹದಿಬದೆಯ ಧರ್ಮವನ್ನು ಮೆಚ್ಚಿ ವರವನ್ನು ನೀಡುವನು. ಹೀಗೆ ಸಾವಿತ್ರಿಯು ಬೆಳಕಳಿದಾ ತನ್ನ ಮಾವನ ಕಂಗಳಿಗೆ ಬೆಳಕನ್ನು ಪಡೆದಳು.

ಹೀಗೆ ಸಾವಿತ್ರಿಯು ಯಮನನ್ನು ಬಿಡದೆ ಪತಿಯ ಪ್ರಾಣವನ್ನು ಬಿಡದೆ ಮರ್ತ್ಯಲೋಕ, ಮೃತ್ಯುಲೋಕಗಳಲ್ಲಿ ಹಿಂಬಾಲಿಸುವಳು ಮರ್ತ್ಯಲೋಕದಲ್ಲಿ ಏಕೆ ಹಿಂಬಾಲಿಸುತ್ತಿರುವೆ ಎಂದು ಯಮನು ಕೇಳಿದಾಗ

ಸಾವಿತ್ರಿ: ಧರ್ಮವಿದು ಹೇ ಧರ್ಮ

ಅಲ್ಲದೇ ಹೋಗಲೆಂದೆಳಸುವನು ಆದರೇಂ
ಮನವಿನಿಯನನು ಅನುಸರಿಸುತಿದೆ ಹೋಗಲೋ
ಲ್ಲದು ಹಿಂದೆ ಮನವನನುಸರಿಸುತಿದೆ ದೇಹ
ಮನದ ಧರ್ಮವ ಮನವು ಮಾಡುತಿದೆ ನನ್ನಾತ್ಮ
ವಾಗಲೇ ನಿನ್ನ ಕೈಯಲ್ಲಿಹುದು ಪತಿಯಾತ್ಮ
ದರ್ಧ ಸತಿ ಎಂಬುದದು ಋತಸಿದ್ಧ. ಆತ್ಮವಿಹ
..................................................................
ಕಡೆ ದೇಹ ಮನಸುಗಳು ಹೋಗುವುದು ಧರ್ಮ!

ಎಂಬ ಉತ್ತರವನ್ನು ಯಮಧರ್ಮನಿಗೆ ನೀಡುವಳು ಇವಳ ಸತಿಧರ್ಮಕ್ಕೆ ಮೆಚ್ಚಿ ಯಮನು ಸಾವಿತ್ರಿಯ ಅಪೇಕ್ಷೆಯಂತೆ ಅವಳ ಮಾವನವರಿಗೆ ಕಳೆದುಹೋಗಿದ್ದ ಸಿರಿಯನ್ನೂ ರಾಜ್ಯವನ್ನೂ ದಯಪಾಲಿಸುವನು.

ಹೀಗೆ ಯಮನು ಯಮಲೋಕಕ್ಕೆ ಪ್ರವೇಶ ಮಾಡಲು ಸಾವಿತ್ರಿ ಪುನಃ ತನ್ನ ಅನುಸರಿಸುವುದನ್ನು ಕಂಡು ಕೋಪೋದ್ರಿಕ್ತನಾಗಿ

ಯಮ : ನಾನಿನ್ನು ಸಹಿಸಲಾರೆನು, ದೇವಿ
ಎರಡು ವರಗಳನ್ನಿತ್ತೆ. ಮತ್ತೆ ಹಿಂಬಾಲಿಸುವೆ
ಪರರ ಪೀಡಿಪುದಿಂತು ಧರ್ಮವೇ? ಘನಶೀಲೆ
ಸಾವಿತ್ರಿ?

ಸಾವಿತ್ರಿ : ಪತಿಯ ತ್ಯಜಿಪುದು ಸತಿಗೆ ಧರ್ಮವೇ
ಯಮದೇವ? ನಾ ನಿನ್ನನನುಸರಿಸುತಿಲ್ಲ
ನೀನೆ ಎಳೆದೊಯ್ಯುತಿಹೆ, ನನ್ನ ಪತಿಯಲ್ಲಿಹುದು
ನನ್ನಾತ್ಮ! ಧರ್ಮಚ್ಯುತಿಯಿನಿತಿಲ್ಲ ಇದರಲ್ಲಿ! ಎನ್ನುವಳು

ಸಾವಿತ್ರಿಯನ್ನು ಕುರಿತು ಯಮನು ನಿನ್ನ ಪತಿ ಸ್ವರ್ಗದ ಬದಲು ನರಕಕ್ಕೆ ಇಳಿದರೆ ನೀನು ಅವನ ಹಿಂದೆ ಹೋಗುವೆಯೇನು? ಎನ್ನಲು ಸಂತಸದಿಂದ ಹೋಗುವೆನು ಯಮರಾಯ, ಹಿಗ್ಗಿ ಆನಂದಿಂದ ಅವನ ಅಪ್ಪುಗೆಯನು ಅಪ್ಪುವೆನು. ಪತಿಯಿದ್ದಲ್ಲಿ ಸ್ವರ್ಗ, ವೈಕುಂಠ, ಪ್ರೇಮವೆಲ್ಲಿರುವುದೋ ಅಲ್ಲಿ ಕೈಲಾಸ ಎದೆಯೊಲ್ಮೆ ಎಲ್ಲಿಹುದೊ ಅಲ್ಲಿಹುದು ಮುಕ್ತಿ. ಎಂದು ಯಮನಿಗೆ ತಿಳಿಸಿ ಯಮನ ಮೆಚ್ಚುಗೆ ಗಳಿಸಿ ಯಮಧರ್ಮನು ಇವಳಿಗೆ ಪತಿಭಿಕ್ಷೆಯನ್ನು ಕರುಣಿಸುವನು ಹಾಗೂ ಸಾವಿತ್ರಿಯ ಹೆಸರು ಚಿರಸ್ಥಾಯಿಯಾಗುವಂತೆ ಹರಿಸಿದನು.

ಕುವೆಂಪುರವರು ಈ ನಾಟಕದಲ್ಲಿ ಮಾಡಿರುವ ಕೊನೆಯ ಬದಲಾವಣೆಯ ಪ್ರಸಂಗವೆಂದರೆ, ಉಪಸಂಹಾರ ದೃಶ್ಯದಲ್ಲಿ ಯಮಧೂತ ಯಕ್ಷರು ಯಮನ ಸೋಲನ್ನು ಸಮರ್ಥಿಸುವ ಬಗೆ ಕುತೂಹಲಕರವಾಗಿದೆ. ಇದು ಕೂಡ ಯಕ್ಷ ಯಮದೂತರು ನುಡಿಯುವ ಸಂಭಾಷಣೆಯೇ ಆಗಿದೆ.

ದೂತ : ಸೋಜಿಗ! ಸೋಜಿಗ ಯಕ್ಷ
ಹಿಂದೆಂದು ಕಾಣದಿಹ ಕೌತುಕವ ಕಂಡೆ
ಪ್ರೇಮ ಧರ್ಮದ ಗೆದ್ದು ಬಾವುಟವ ನಭರೆತ್ತಿ
ಹಿಡಿದುದನು ಕಂಡೆ ಯಮನ ಸೋಲನು ಕಂಡೆ!

ಯಕ್ಷ : ಏನಾಯ್ತು, ಯಮದೂತ? ಏನಾಯ್ತು!

ದೂತ : ಮೊತ್ತಮೊದಲ್ ಎನ್ನೀ ಬಾಳಿನಲಿ
ಯಮನ ಸೋಲನು ಕಂಡೆ

ಯಕ್ಷ : ಅದೇಕೆ

ದೂತ : ಈಗಾದುದೇನು ! ಮೃತ್ಯು ಒಲ್ಮೆಗೆ ಸೋತು
ಸತ್ಯವಂತನ ಜೀವವನು ಕಪ್ಪವಾಗಿತ್ತು,
ಅಶ್ವಪತಿಸುತೆಯ ಕೈಯೊಳು, ತನ್ನ ಸೋಲನೊ
ಪ್ಪಿಹುದಿಂದು!

ಯಕ್ಷ : ಯಮನ ಸೋಲಪಮಾನವಲ್ಲ
ಕೀರ್ತಿಕರ! ಯಮದೂತ ನೀನೇನು ಬಲ್ಲೆ?

ಈ ಸಂವಾದದಲ್ಲಿ ತಿಳಿಯುದೇನೆಂದರೆ ಯಮನ ಸೋಲು ಧರ್ಮಗಳಿಗೂ ಮಿಗಿಲಾದ ಎದೆಯ ಒಲುಮೆಯ ಧರ್ಮಕ್ಕೆ ಸತಿಧರ್ಮ, ಹದಿಬದೆಯ ಧರ್ಮಕ್ಕೆ ಗೌರವಿಸಿ ತನ್ನ ಯಮಪಾಶದ ಕಠೋರತೆಯನ್ನು ಸಡಿಲಿಸಿ ಸತ್ಯವಾನನಿಗೆ ಪ್ರಾಣಧಾನವನ್ನು ನೀಡಿತು.

ಒಟ್ಟಿನಲ್ಲಿ ಯಮನ ಸೋಲು ನಾಟಕದಲ್ಲಿ ಸಾವಿತ್ರಿಯು ತನ್ನ ಪತಿವ್ರತಾಧರ್ಮ-ಪಾಲನೆಯಲ್ಲಿ ಇಡೀ ಭಾರತೀಯ ಸಂಸ್ಕೃತಿಯನ್ನು ಶ್ರೀಮಂತ ಗೊಳಿಸಿರುವ ಹಿಂದೆ ಕುವೆಂಪುರವರ ಸಾಂಸ್ಕೃತಿಕ ಪ್ರಜ್ಞೆ, ಪ್ರತಿಭೆಗಳು ಅಡಗಿವೆ.

ಇಲ್ಲಿ ಕುವೆಂಪು 'ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವಂತೆ' ಸಾವಿತ್ರಿಯ ಹದಿಬದೆಯಧರ್ಮದಿಂದ ಯಮಧರ್ಮನ ನಿಯಮವನ್ನು ತೆಗೆದುಹಾಕಿ ಯಮನು ತನ್ನ ನಿಯಮವನ್ನು ಸಡಿಲಿಸುವಂತೆ ಮಾಡಿದ್ದಾರೆ. ಅದೇ ರೀತಿ ಸಾವಿತ್ರಿಯ ತೀರ್ಮಾನದ ದೃಢತೆ ಅವಳ ಗಟ್ಟಿ ನಿರ್ಧಾರ, ಮನೋಸ್ಥೈರ್ಯಗಳನ್ನು ಇಲ್ಲಿ ಕಾಣಬಹುದು.

ಈ ನಾಟಕದಲ್ಲಿ ಸಾವಿತ್ರಿಯ ನಡವಳಿಕೆಯಲ್ಲಿ ಕುವೆಂಪುರವರ ಅಹಿಂಸಾ-ಧರ್ಮವನ್ನು ಕಾಣಬಹುದಾಗಿದೆ. ಇಡೀ ನಾಟಕದುದ್ದಕ್ಕೂ ಸಾವಿತ್ರಿ ಯಮಧರ್ಮನಿಗೆ ಎಲ್ಲೂ ಅಹಂಕಾರಿಯಾಗಿ ವರ್ತಿಸಿಲ್ಲ. ಹಿಂಸಾಮನೋಭಾವವನ್ನು ಪ್ರಕಟಿಸದೆ ಕೇವಲ ತಟಸ್ಥವಾಗಿ 'ನಿನ್ನ ಧರ್ಮವ ನೀನು ಮಾಡು ನನ್ನ ಧರ್ಮವನ್ನು ನಾನು ಮಾಡುವೆ' ಎಂದಷ್ಟೇ ಹೇಳುತ್ತಾ ಯಮಧರ್ಮನಿಗೆ ಶಾಪಹಾಕದೆ ಪ್ರತಿ ದೃಶ್ಯಗಳಲ್ಲೂ ಕರುಣೆ-ಯಿಂದ ತನ್ನ ಪತಿಯ ಪ್ರಾಣವನ್ನು ಕರುಣಿಸುವಂತೆ ಬೇಡಿಕೊಂಡಿದ್ದಾಳೆಯೇ ವಿನಃ ಉದ್ಧಟತನದಿಂದ ವರ್ತಿಸಿಲ್ಲ ಇದು ಇವಳ ಚಾರಿತ್ರ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ನಾಟಕದ ಕೊನೆಯ ಭಾಗದಲ್ಲಿ ಎದೆಯೊಲ್ಮೆಯ ಧರ್ಮವು ಯಮಪಾಶದಿಂದ ಮುಕ್ತಿ ಪಡೆದು ಗೆದ್ದಿತು ಎಂಬುದರಲ್ಲಿ ಕುವೆಂಪುರವರಲ್ಲಿರುವ ಪ್ರೇಮತ್ವ, 'ಜಗತ್ತನ್ನು

ಪ್ರೀತಿಯಿಂದ ಗೆಲ್ಲು' ಎಂಬ ಅವರ ಸಂದೇಶವು ಗೋಚರಿಸುತ್ತದೆ. ಸತ್ಯವಾನ ಮತ್ತು ಸಾವಿತ್ರಿಯರ ನಡುವಿನ ದಾಂಪತ್ಯ ಅನುರಾಗ, ಪರಸ್ಪರ ತ್ಯಾಗ ಮನೋಭಾವ, ನಿಸ್ವಾರ್ಥತೆ, ಪ್ರೀತಿ, ನಂಬಿಕೆ ಮುಂತಾದ ಗುಣಗಳನ್ನು ತುಂಬಿ ಇವರಿಬ್ಬರನ್ನು ಅಮರ ಪ್ರೇಮಿಗಳನ್ನಾಗಿಸಿ, ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರ ಪಾತ್ರವನ್ನು ವೈಭವೀಕರಿಸಿ ಮುಂದಿನ ಜನಾಂಗಕ್ಕೆ ಆದರ್ಶಪ್ರಾಯರಾಗಿಸಿದ್ದಾರೆ.

ನರಹಳ್ಳಿ ಬಾಲಸುಬ್ರಮಣ್ಯರವರು ಹೇಳುವಂತೆ ಸಾವಿತ್ರಿ ಕಥೆಯನ್ನು ಕುವೆಂಪು ಆಧುನಿಕ ಅರಿವಿನ ಹಿನ್ನೆಲೆಯಲ್ಲಿ ಹೊಸರೀತಿ ಗ್ರಹಿಸಿದರು. ಪಾತಿವ್ರತ್ಯಧರ್ಮವನ್ನು ಸಾರುವ ಪ್ರಧಾನ ಸಂಸ್ಕೃತಿಯ ಪ್ರಮುಖ ಮೌಲ್ಯವೊಂದನ್ನು ಪ್ರತಿಪಾದಿಸುವ ರೀತಿಯೆ ಸಾವಿತ್ರಿ ಕಥೆ ಕುವೆಂಪುರವಿಗೆ ಹೊಸದರ್ಶನ ನೀಡಿದೆ. ಪ್ರೇಮ ಪ್ರಧಾನವಾಗಿ ಕಂಡಿದೆ. ಈ ಮೂಲಕ ಯಮನ ಸೋಲು ನಾಟಕದಲ್ಲಿ ಕುವೆಂಪು ಎರಡು ಸಂಗತಿಗಳನ್ನು ಏಕಕಾಲದಲ್ಲಿ ಸಾಧಿಸಿರುವ ಯಮನಸೋಲು ಭಾರತೀಯ ಪರಿಸರದಲ್ಲಿ ಅದ್ಭುತ ಪ್ರೇಮ ಕಥೆಯೊಂದನ್ನು ಕಂಡುಕೊಂಡದ್ದು, ಮತ್ತೊಂದು ಸತಿಸಾವಿತ್ರಿಯನ್ನು ರೂಢಿಯ ಜಾಡಿನಿಂದ ಬಿಡುಗಡೆಗೊಳಿಸಿ ಹೊಸ ರೀತಿ ಕಂಡಿದ್ದಾರೆ.

**ನಾಟಕ : ಜಲಗಾರ**

ಕುವೆಂಪುರವರ ಸಾಮಾಜಿಕ ನಾಟಕಗಳಲ್ಲಿ 'ಜಲಗಾರ' ಉತ್ತಮವಾದದ್ದು, ಜೊತೆಗೆ ವರ್ಣಾಶ್ರಮ ವಿರೋಧಿನೆಲೆಯ ಪಯಣದ ಮೊದಲಹಂತದ ಕೃತಿ ಈ ನಾಟಕವು ಬಸವಣ್ಣನವರ 'ಕಾಯಕವೇ ಕೈಲಾಸ' ತತ್ವದ ತಳಹದಿಯಲ್ಲಿ ರಚಿತವಾಗಿದೆ. ಸಾಮಾನ್ಯನೂ ಕಾಯಕತತ್ವದಿಂದ ಪೂಜನೀಯನಾಗುತ್ತಾನೆ ಎಂಬ ಅಂಶ ಈ ನಾಟಕದಲ್ಲಿ ವ್ಯಕ್ತವಾಗಿದೆ. ಜಲಗಾರನೊಬ್ಬ ದೇವಾಲಯಕ್ಕೆ ಹೋಗದಿದ್ದರೂ ತನ್ನ ಕರ್ತವ್ಯನಿಷ್ಠೆಯಿಂದ ದೇವರನ್ನು ಕಾಣುವುದು ಇಲ್ಲಿನ ಸಾರ.

ನಾಟಕವು ಒಂದು ದಿನದಲ್ಲಿ ನಡೆಯುವ ಕಥಾವಸ್ತುವನ್ನು ಒಳಗೊಂಡಿದ್ದು, ಎರಡು ದೃಶ್ಯಗಳನ್ನು ಒಳಗೊಂಡಿದೆ, ಎರಡೂ ದೃಶ್ಯಗಳು ಭೂದೇವಿಯ ಹಾಡಿನಿಂದ ಪ್ರಾರಂಭವಾಗುತ್ತವೆ. ಹೀಗೆ ಮೊದಲನೆಯ ದೃಶ್ಯದಲ್ಲಿ ಸೂರ್ಯೋದಯವನ್ನು ಆಹ್ವಾನಿಸಿದರೆ, ಎರಡನೆಯ ದೃಶ್ಯದಲ್ಲಿ ರಾತ್ರಿರಾಣಿಯನ್ನು ನಾಟಕದ ಸೂತ್ರದಾರಳು ಆಹ್ವಾನಿಸುತ್ತಾಳೆ. ಮೊದಲನೆಯ ದೃಶ್ಯ ದೇವಸ್ಥಾನಕ್ಕೆ ಹೋಗುವ ದೃಶ್ಯವಾದರೆ ಎರಡನೆಯ ದೃಶ್ಯ ದೇವಸ್ಥಾನದಿಂದ ಹಿಂದುರುಗಿ ಬರುವ ದೃಶ್ಯ ಹೀಗಾಗಿ ಸಹಜವಾಗಿ 'ದೇವಸ್ಥಾನ' ನಾಟಕದ ಕೇಂದ್ರಬಿಂದು.

ಜಲಗಾರ ನಾಟಕದ ಆದಿಯಿಂದ ಅಂತ್ಯದವರೆಗೆ ಕಾಣಿಸಿಕೊಳ್ಳುವ ಪಾತ್ರ ಜೊತೆಗೆ ಕಾಯಕವೇ ಕೈಲಾಸ ಎಂದು ನಂಬಿರುವ ಜಲಗಾರ ಕಾಯಕಯೋಗಿ

ಯಾಗಿದ್ದು ಮೂಢನಂಬಿಕೆಯಲ್ಲಿ ಮುಳುಗಿರುವ ರೈತ, ಮೂಲಭೂತವಾದಿ ಪಾರ್ವರು, ವೈಚಾರಿಕ ಕ್ರೂರತೆಯಿಂದ ಕೂಡಿರುವ ತರುಣ ಯುವಕರು ಹೊಟ್ಟೆಗಿಲ್ಲದ ತಿರುಕ, ಇವರನ್ನು ನಾಟಕದ ಮೊದಲನೆಯ ದೃಶ್ಯದಲ್ಲೂ ನಾವು ಕಾಣುತ್ತೇವೆ. ಎರಡನೆಯ ದೃಶ್ಯದಲ್ಲಿ ಜಾತ್ರೆಯಿಂದ ಹಿಂದಿರುಗುವ ರೈತ ಬದುಕಿನಲ್ಲಿ ಹತಾಶೆ ಹೊಂದಿರುವ ಅನಾಥ ಹೆಣ್ಣು ಹುಡುಗಿ, ಜಾತ್ರೆಯಲ್ಲಿ ಶಿವನ ಪೂಜೆಯಿಂದ ಆದ ಲಾಭವನ್ನು ಲೆಕ್ಕಾಚಾರ ಮಾಡುತ್ತಿರುವ ಪಾರ್ವರು, ಯುವಕರು, ಜಲಗಾರ ವೇಷದ ಶಿವ ಇವರನ್ನು ಕಾಣಬಹುದು.

ಜಲಗಾರನು ತನ್ನ ದೈನಂದಿನ ಕಾಯಕಕ್ಕೆ ಇಳಿದು ಕೈಯಲ್ಲಿ ಬುಟ್ಟಿ ಪೊರಕೆ ಹಿಡಿದು ಬಂದು ಬೀದಿಯ ಗುಡಿಸಲು ನೋಡಲು ಎಡೆಬಿಡದೆ ಸುರಿಯುತಿಹ ಇಬ್ಬನಿಯ ಮಂಜು, ಬೀದಿಯು ಕಣ್ಣಿಗೆ ಕಾಣಿಸದಂತೆ ಆವರಿಸಿರಲು, ಆ ಮಂಜು ಇಳಿಯುವವರೆಗೆ ಒಂದು ಎತ್ತರವಾದ ಅರೆಯ ಮೇಲೆ ಕುಳಿತು ಪೊರಕೆ ಬುಟ್ಟಿಗಳನ್ನಿಟ್ಟು ಹಾಡುತ್ತಾನೆ. ನಂತರ ರೈತನೊಬ್ಬನ ಪ್ರವೇಶವಾಗುತ್ತದೆ. ಇವನು ತನ್ನ ಹಾಡಿನ ಮೂಲಕ ಕಾಯಕವೇ ಕೈಲಾಸ ಮತ್ತು ತಾನು ಮಣ್ಣಿನ ಮಗ ಎಂಬುದನ್ನು ಹಾಡಿನ ಮೂಲಕ ಪ್ರತಿಧ್ವನಿಸುತ್ತಾನೆ.

ನೇಗಿಲ ಯೋಗಿಯು ನಾನು!
ಮಣ್ಣಿನ ಭೋಗಿಯು ನಾನು,
ಕೆರೆಗಳ ತೊರೆಗಳ ಗೆಳೆಯನು ನಾನು,
ಹೊಲಗಳ ಬನಗಳ ದೊರೆ ನಾನು,
ಹೊಯ್ಯುವೆ, ಗೆಯ್ಯುವೆ, ಕೊಯ್ಯುವೆ ನಾನು....

ಎಂದು ಹಾಡುತ್ತಾ ಹಣ್ಣು ಕಾಯಿ ತಂದು ಹೊಸ ಬಟ್ಟೆಯನ್ನುಟ್ಟು, ಶಿವಗುಡಿಗೆ ಜಾತ್ರೆಗೆಂದು ತೆರಳುವನು ದಾರಿಯಲಿಸಿಕ್ಕಿ ಜಲಗಾರನನ್ನು ಕಂಡು ಜಾತ್ರೆಗೆ ಬರುವಂತೆ ಕರೆಯುವನು. ಜಲಗಾರನು ಜೋಯಿಸರು ತನ್ನನ್ನು ಶಿವಗುಡಿಗೆ ಸೇರಿಸರು, ಅಲ್ಲಿಗೆ ಬರಲು ನಾನೊಲ್ಲೆನೆಂದು ಹೇಳುವನು.

ಇಲ್ಲಿ ಜಲಗಾರ ಮತ್ತು ರೈತ ಇಬ್ಬರೂ ವೈದಿಕ ಸಂಸ್ಕೃತಿಯನ್ನೂ ವಿರೋಧಿಸುವ ಕಾಯಕ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಪ್ರತಿನಿಧಿಗಳಂತೆ ಕಾಣಿಸುತ್ತಾರೆ. ಆದರೆ ಮುಂದೆ ರೈತ ಶ್ರೇಣಿಕೃತ ಸಮಾಜದ ನಿಯಮಗಳನ್ನು ಪಾಲಿಸುವವನಂತೆ ಚಿತ್ರಿತನಾಗಿದ್ದಾನೆ. ಜಾತ್ರೆಯಲ್ಲಿನ ಜನಸಂಭ್ರಮ, ಪೂಜೆ, ಮನಸ್ಕಾರಗಳು ಇವುಗಳ ಮೂಲಕ ತನ್ನ ಬದುಕಿನ ಸಂತೋಷದ ಕ್ಷಣಗಳನ್ನು ಕಾಣುತ್ತಾನೆ.

ಆದರೆ ಜಲಗಾರ ಗುಡಿಯ ಹೊರಗಿದ್ದು ಪ್ರಕೃತಿಯಲ್ಲಿಯೇ ಶಿವನನ್ನು ಕಾಣುವನು.

ಕಾಣದವನೆಂತು ಕಾಣ್ಬನು ಶಿವನ ಗುಡಿಯಲ್ಲಿ?
ತಣ್ಣದಿರ ಬೆಂಗದಿರನರಿಲುಗಳೆ ಸೊಡರುಗಳು.
ಸುಮಮಾಲೆ ಅಲರುಗಳ ಚೆಲ್ಲುತಿರುವಡವಿಗಳು.
ಮುನೀರು ತೊರೆ ಕೆರೆಗಳೇ ಪಂಚಪಾತ್ರೆ
ಬಿತ್ತರದ ಬಾಂದಳವೆ ಗೋಪುರಂ! ಹೊಳೆಗಳಲಿ
ಹರಿವ ಸಲಿಲವೆತೀರ್ಥ:ಸುಮಗಂಧವೇ ಧೂಪ
ಹಕ್ಕಿಯಿಂಚರವೇ ಸುಸ್ವರ ಮೇಳ! ಎದೆಯೊಲವೆ
ವರಧರ್ಮಶಾಸ್ತ್ರ. ಭಕ್ತಿಯೆ ದಿವ್ಯಾತ್ಮ ಯಜ್ಞ
ಎದೆಯ ಮಣೆಯೇ ಯಜ್ಞಶಾಲೆ
ನಲ್ವಾತುಗಳೆ ಮಂತ್ರಘೋಷ; ನೀತಿಯೆ
ಪರಮವೇದ ತಿರೆಗಿಂತ ದೇಗುಲವದೊಳದೇನ್?

ಈ ಭಾಗಕ್ಕೆ ಷೆಲ್ಲಿಯವರು ಹೇಳುತ್ತಾ 'ಇಲ್ಲಿ ಕುವೆಂಪುರವರ ಪ್ರಕೃತಿ ಪ್ರಭಾವ ದಟ್ಟವಾಗಿದೆ' ಎಂದು ಹೇಳಿದ್ದಾರೆ. ಇಲ್ಲಿ ಜಲಗಾರನಿಗೆ ಪ್ರಕೃತಿಯೇ ದೇವಾಲಯದ, ದೇವರ, ರೂಪದಲ್ಲಿ ಕಂಡಿದೆ. ಇದರ ಜೊತೆಗೆ ಬಸವಣ್ಣನವರ ತತ್ವವನ್ನು ಇಲ್ಲಿ ಲೇಪಿಸಬಹುದಾಗಿದೆ.

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡಲಯ್ಯ ಬಡವನಯ್ಯ
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರ ಹೊನ್ನ ಕಳಸವಯ್ಯ ಎಂಬ ಮಾತನ್ನು ಪ್ರತಿಧ್ವನಿಸುತ್ತದೆ.

ಜಲಗಾರನು ಶಿವನನ್ನು ಕುರಿತು ಹಾಡುವನು. ಪಾರ್ವರು ಜಲಗಾರನ ಹಾಡನ್ನು ಕೇಳಿ ಆನಂದಿಸಿ ನಂತರ ಆತನೇ ಹಾಡಿದ್ದು ಎಂಬುದು ತಿಳಿದಾಗ

ಶೂದ್ರರೊಳ್ ಕವಿವರ್ಯರುದಿಸುವರೆ? ಹುಟ್ಟುವರೆ
ಪಂಡಿತರ್, ಜನಿಸುವರೇ ಶಿಲ್ಪಿಗಳ್, ನಾಯಕರ್?
ಯೋಗಿಗಳ್, ಅಸದಳಂ; ಹೊತ್ತಾಯ್ತು ಹೋಗೋಣ ಎಂದು ಹೇಳಿ

ವಿದ್ಯೆಯು ಕೆಲವರ ಸ್ವತ್ತು ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಕುವೆಂಪು ಹುಟ್ಟಿಗೂ ಪ್ರತಿಜ್ಞೆಗೂ ಸಂಬಂಧಕಲ್ಪಿಸುವ ರೂಢಿಯ ವ್ಯವಸ್ಥೆಯನ್ನು

ಪ್ರಸ್ಥಾಪಿಸಿದ್ದಾರೆ ಹಾಗೂ ಅವ್ಯವಸ್ಥೆಯನ್ನು ಪ್ರಶ್ನಿಸಿ ತಮ್ಮ ಪ್ರತಿಭೆಯಿಂದಲೇ ಉತ್ತರ ಕೊಡಲು ಪ್ರಯತ್ನಿಸುತ್ತಿದ್ದರು.

ನಾಟಕದಲ್ಲಿ ಬರುವ ತರುಣ ಯುವಕರು ಮೊದಲು ವೈಚಾರಿಕರಂತೆ ಕಂಡರೂ ನಂತರ ಇದೇ ತರುಣರು ಕುಂಟನೂ, ಕುರುಡನೂ ಆದ ತಿರುಕ ಹಸಿವಿನಿಂದ ನರಳುತ್ತಾ ಭಿಕ್ಷೆ ಬೇಡಿದಾಗ ಆತನನ್ನು ಒದ್ದು ನೂಕಿ ಹೋಗುತ್ತಾರೆ. ಇಂದಿನ ತರುಣ ಯುವಕರಲ್ಲಿ ಕಾಣುವ ವೈಚಾರಿಕ ಕ್ರೂರತೆಯನ್ನು ಚೆನ್ನಾಗಿ ಪ್ರತಿಬಿಂಬಿಸಿದ್ದಾರೆ.

ಎರಡನೆಯ ದೃಶ್ಯದಲ್ಲಿ ದೇವಸ್ಥಾನಕ್ಕೆ ಹೋದವರು ಹಿಂದಿರುಗಿ ಬರುತ್ತಾರೆ ಹಾಗೆ ಬಂದವರಲ್ಲಿ ರೈತ ಜಾತ್ರೆಯ ವೈಭವವನ್ನು ಕೊಂಡಾಡುತ್ತಾನೆ. ಜಲಗಾರನು ರೈತನನ್ನು ಕುರಿತು, ಶಿವನ ಗುಡಿಯಿಂದೇನು ತಂದಿರುವೆ ಹೇಳು?

ಶಿವನ ತರಲಿಲ್ಲವೇ? ಎಂಬ ಜಲಗಾರನ ಮಾತುಗಳಲ್ಲಿ ಕುವೆಂಪುರವರ ವೈಚಾರಿಕತೆ ಅಡಗಿದೆ. ಈ ಮಾತುಗಳು ರೈತನಿಗೆ ಮರುಳು ಮಾತು ಎನಿಸುತ್ತವೆ. ಪ್ರತ್ಯಕ್ಷ ಶಿವನನ್ನು ಪ್ರಮಾಣೀಕರಿಸಿ ನಂಬುವ, ಸಂಶಯಪ್ರಜ್ಞೆಗೆ ಒಳಗಾಗಿರುವ ಪ್ರಪಂಚದ ದುರಾವಸ್ಥೆಯ ಚಿತ್ರಣ ಇದೆ ಜಲಗಾರ ವೇಷದ ಶಿವ ಜಲಗಾರ ಮುಂದೆ ಪ್ರತ್ಯಕ್ಷವಾದಾಗ ಗೋಚರವಾಗುತ್ತದೆ. ಇಲ್ಲಿ ಬಸವಣ್ಣನವರ 'ಕಲ್ಲುನಾಗರ ಕಂಡರೆ ಹಾಲೆರೆವರು, ದಿಟದ ನಾಗರ ಕಂಡರೆ ಕೊಲ್ಲು ಕೊಲ್ಲೆಂಬುವರು' ವಚನವನ್ನು ಉದಾಹರಿಸಬಹುದಾಗಿದೆ.

ಜಲಗಾರನಿಗೆ ಶಿವನು ಪ್ರತ್ಯಕ್ಷನಾದ ಸನ್ನಿವೇಶದಲ್ಲಿ ಕುವೆಂಪುರವರ ಆಧ್ಯಾತ್ಮಿಕ ಕಲ್ಪನೆ, ಪ್ರತಿಭೆಯ ಹರಿವು ತಿಳಿಯುತ್ತದೆ.

ಜಲಗಾರ : ನೀನಾರು ಆಕೃತಿಯೆ! ನೀನಾರು? ಯಾರು?
ಮಾನುಷವಾಗಿ ಕಂಡರೂ ಅಮಾನುಷವಾಗಿ ತೋರುತಿಹೆ?

ಶಿವ : ಅಂಜದಿರು ಸೋದರನೆ ಅಂಜದಿರು ನಾನಿನ್ನ ಬಂಧು
ನಾ ನಿನ್ನ ಜಾತಿ

ಜಲಗಾರ : ನೀನೆನ್ನ ಜಾತಿ
ಊರ ಜಲಗಾರ ನಾನು

ಶಿವ : ನಾನೊಬ್ಬ ಜಲಗಾರ
ಅಂಜದಿರು ಸೋದರನೆ ಜಗದ ಜಲಗಾರ ನಾನು
ಶಿವನೆಂದು ಕರೆದರು ಎನ್ನ!

ಎಂದು ಹೇಳುತ್ತಾ ಪ್ರಕೃತಿಯ ಚರಾಚರ ವಸ್ತುಗಳು, ಅಂಶಗಳು, ನನ್ನೊಬ್ಬನಿಗೆ ಋಣಿಯಾಗಿ ಬಾಳುತಿವೆ, ಎನ್ನುವುದರಲ್ಲಿ ಕುವೆಂಪುರವರ ಪರಿಸರ ಪ್ರಜ್ಞೆ, ಪರಿಸರ ಮತ್ತು ಆಧ್ಯಾತ್ಮಿಕತೆಯಲ್ಲಿ ಅವರಲ್ಲಿರುವ ಆಸಕ್ತಿಗಳನ್ನು ತಿಳಿಯಬಹುದು.

ಜಲಗಾರನು ಶಿವನನ್ನು ಕುರಿತು, ತಿಳಿದವರು, ಪಂಡಿತರು ಬೇರೊಂದು ರೀತಿಯಲ್ಲಿ ಬಣ್ಣಿಸಿರುವರು ನಿನ್ನ ಎಂದ ಕೇಳಲು ಶಿವನು

ಸೋದರನೆ, ಶಿವನು ಶಾಸ್ತ್ರಗಳ ಶಿವನಲ್ಲ
ಕಾವ್ಯಗಳ ಶಿವನಲ್ಲ, ಕವಿತೆಯಾ ಶಿವನಲ್ಲ
ಬೆಳ್ಳಿಬೆಟ್ಟದ ಮೇಲೆ ಗಿರಿಜೆಯೊಡಗೂಡಿ
ಸರಸವಾಡುವ ರಸಿಕ ಶಿವನಲ್ಲ! ಬ್ರಹ್ಮಾಂಡ
ಒತ್ತುತಿಹ ಕಸದ ರಾಸಿಯ ಮೇಲೆ ಹತ್ತಿ
ನಿಂತು ನರ್ತನವೆಸಗುತಿಹ ತೋಟಿ ನಾನು!
ನಿಜಶಿವನು ಜಲಗಾರ! ನಿನ್ನ ಮುಂದಿಹನು ನೋಡು!

ಶಿವನ ಮಾತುಗಳಲ್ಲಿ ಕುವೆಂಪು ಮೂಢನಂಬಿಕೆಗಳು, ಧರ್ಮ ಜಾಡ್ಯತೆಯನ್ನು ಖಂಡಿಸುವ ಧ್ವನಿ ಪರಿಚಯವಾಗುತ್ತದೆ. ಇಲ್ಲಿ ಮೂಲಕ್ಕಿಂತ ಭಿನ್ನವಾಗಿ ಕುವೆಂಪು ತಮ್ಮ ಶಿವನನ್ನು ಪರಿಚಯಿಸಿದ್ದಾರೆ.

ಹೀಗೆ ಶಿವನು, ಜಲಗಾರ ಶಿವನು, ಶಿವಗುಡಿಯ ಪೀಠದಲ್ಲಿ ಎಂದೆಂದಿಗೂ ಇಲ್ಲ. ಅವನಿಗೆ ಗಂಗೆ, ಹಣೆಗಣ್ಣು ಉರಗಗಳ ಮಾಲೆ, ಬೂದಿ, ಜನಿವಾರ ಇವುಗಳು ಯಾವುವೂ ಇಲ್ಲ. ಶಿವನ ಬಡವನೆದೆಯಲ್ಲಿ ಒಕ್ಕಲಿಗನೆಡೆಯಲ್ಲಿ, ಹೊಲೆಯನ ಕಾರ್ಯದಲ್ಲಿರುವೆ, ಕುಂಟರನು, ಕುರುಡರನು, ದೀನರನು, ಅನಾಥರನು ಕೈಹಿಡಿದು ಪೊರೆಯುತಿರುವೆ ಎಂಬುದಾಗಿ ತನ್ನ ನೆಲೆಯನ್ನು ತೋರುತ್ತಾನೆ. ಇಲ್ಲಿ ಕುವೆಂಪುರವರ ಸಾಮಾಜಿಕ ಕಳಕಳಿ ಅಡಕವಾಗಿದೆ. ಹೀಗೆ ಶಿವನು ತನ್ನ ಇರುವನು ಜಲಗಾರನಿಗೆ ತಿಳಿಸುತ್ತಾನೆ. ಶಿವನ ಮಾತಿನಿಂದ, ದರ್ಶನದಿಂದ, ಜಲಗಾರ ಸಂತೃಪ್ತನಾಗುವನು ಅಲ್ಲಿಗೆ ನಾಟಕ ಮುಗಿಯುತ್ತದೆ.

ಹೆಚ್.ಎಸ್. ರಾಮಚಂದ್ರೇಗೌಡರು, ಹೇಳುವಂತೆ 'ಜಲಗಾರ' ಕಾಯಕಲ್ಪವನ್ನು ದೇವರ ಸ್ಥಾನದಲ್ಲಿಟ್ಟು ನೋಡುವ ವಸ್ತುಗಳನ್ನೊಳಗೊಂಡ ನಾಟಕ ಇದರ ಸಮರ್ಥನೆಯಲ್ಲಿ ಹಲವು ವೃತಿ ಪಾತ್ರಗಳ ಮೌಲಿಕ ಅಧ್ಯಯನ ಸಾಧ್ಯವಾಗಿದೆ. ಸಹಜ ಭಿಕ್ಷುಕ ಮತ್ತು ನಮ್ಮ ವೇಷದ ಭಿಕ್ಷುಕರ ನಡುವಣ ಜನಜೀವನದ ವಿಮರ್ಶೆ ನಡೆದಿದೆ. ತರುಣ ಯುವಕರಲ್ಲಿ ಕಾಣುವ ವೈಚಾರಿಕ ಕ್ರೂರತೆ, ಮತ್ತು ರೈತರಲ್ಲಿ ಕಾಣುವ ಮೂಢ ಆಚಾರಗಳ ಫಲಿತಾಂಶಗಳ ಕೆಲವೊಮ್ಮೆ ಒಂದೇ ಆಗಿರುತ್ತವೆನ್ನುವ ಇಕ್ಕೆಲಗಳ

ಅವಾಂತರ ಪ್ರಜ್ಞೆ ದೃಢಪಟ್ಟಿದೆ. ಪ್ರತ್ಯಕ್ಷ ಶಿವನನ್ನು ಪ್ರಮಾಣೀಕರಿಸಿ ನಂಬುವ ಸಂಶಯ ಪ್ರಜ್ಞೆಗೆ ಒಳಗಾಗಿರುವ ಪ್ರಪಂಚದ ದುರವಸ್ಥೆಯ ಚಿತ್ರಣ ಪಡಿಮೂಡಿದೆ.[೧]

ಇವುಗಳ ಜೊತೆಗೆ ಗಾಂಧೀಜಿಯವರ ಅಸ್ಪೃಶ್ಯತಾ ಚಳವಳಿ ಹರಿಜನೋದ್ಧಾರ ಮೊದಲಾದ ಕಾಳಜಿಗಳು ಈ ನಾಟಕದ ಹಿನ್ನೆಲೆಯಲ್ಲಿವೆ. ಇದು ಸುಜನಾರವರು ಕುವೆಂಪು ಮತಧರ್ಮಗಳ ಕಡು ವಿರೋಧಿ ನಿಲುವಿನ ಹಿನ್ನೆಲೆಯಲ್ಲಿ ನಾಟಕವು ರಚನೆಯಾಗಿದೆ.

ಡಾ. ಡಿ.ಆರ್. ನಾಗರಾಜುರವರು ಜಲಗಾರ ನಾಟಕದಲ್ಲಿ 'ಸಂವಿಧಾನಾತ್ಮಕ ಸಂಘರ್ಷವಿದೆ' ಎನ್ನುತ್ತಾರೆ. ಗಾಂಧೀಜಿ, ಪರಮಹಂಸ ವಿವೇಕಾನಂದರ ಪ್ರಭಾವ, ಕರ್ಮಸಿದ್ಧಾಂತ ಆಧುನಿಕ ಶಿಕ್ಷಣದ ಫಲಿತವಾಗಿ ಬದಲಾಗುತ್ತಿದ್ದ ಸಾಮಾಜಿಕ ಪರಿಸರ ಶೂದ್ರ ಚಳುವಳಿ ಇವೆಲ್ಲವೂ ತರುಣ ಕುವೆಂಪು ವ್ಯಕ್ತಿತ್ವವನ್ನು ಏಕಕಾಲದಲ್ಲಿ ಪ್ರಭಾವಿಸಿದ ಸಂಗತಿಗಳು. ಈ ಎಲ್ಲದರ ದಟ್ಟ ಪರಿಣಾಮ ಜಲಗಾರ, ನಾಟಕದಲ್ಲಿದೆ ಎಂಬ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಮಾತುಗಳು ನಾಟಕದಲ್ಲಿ ಹೆಚ್ಚು ಸೂಕ್ತವಾಗಿದೆ.

ಜಲಗಾರ ನಾಟಕ ೧೯೨೮ರಲ್ಲಿ ರಚಿತವಾಯಿತು. ಈ ನಾಟಕಕ್ಕೆ ಸಂಬಂಧಿಸಿದಂತೆ ಡಿ.ಆರ್.ನಾಗರಾಜು ಮಾತಗಳು ಉಲ್ಲೇಖನಾರ್ಹವಾಗಿವೆ. ಪೆರಿಯಾರರ ನಾಯಕತ್ವದಲ್ಲಿ ಬ್ರಾಹ್ಮಣೇತರ ಜಾತಿಗಳ ಚಳುವಳಿ ಊಳಿಗಮಾನ್ಯ ಸಂಸ್ಕೃತಿಯ ವಿರುದ್ಧ ಉಗ್ರಚಳುವಳಿಯಾಗಿ ಬೆಳೆಯಿತು. ಜಾತಿ ಪದ್ಧತಿಯ ವಿರುದ್ಧದ ಹೋರಾಟ ಜನತೆಯ ನಡುವೆ ಆಳವಾದ ಬೇರುಗಳನ್ನು ಪಡೆಯಿತು. ಪೆರಿಯಾರರು ಪ್ರತಿಸಂಸ್ಕೃತಿಯೊಂದನ್ನು ಬ್ರಾಹ್ಮಣೇತರ ಜಾತಿಗಳಿಗೆ ನಿರ್ಮಿಸಿಕೊಟ್ಟರು. ಜಾತಿಪದ್ಧತಿಯ ಚೌಕಟ್ಟಿನೊಳಗಿನ ಯಾವೊಂದು ಮೌಲ್ಯವನ್ನಾಗಲೀ, ಸಂಕೇತವನ್ನಾಗಲೀ ಆ ಚಳುವಳಿ ಒಪ್ಪಿಕೊಳ್ಳಲಿಲ್ಲ. ಪ್ರತಿಸಂಸ್ಕೃತಿಯ ಸೃಷ್ಟಿಗಾಗಿ ಅವರು ಭಾರತದ ಇಡೀ ಚರಿತ್ರೆಯನ್ನು ಅದೇ ಶೂದ್ರರ ದೃಷ್ಟಿಕೋನದಿಂದ ವಿವರಿಸಿದರು. ರಾಮಖಳನಾಯಕನಾದ, ರಾವಣ ಪೂಜ್ಯನಾದ.... ಕೇರಳದ ಬ್ರಾಹ್ಮಣೇತರ ಜಾತಿಗಳು ಚಳುವಳಿ ತಮಿಳುನಾಡಿನಲ್ಲಿದ್ದಂತೆ ಸಿಟ್ಟಿನ, ಆಕ್ರೋಶದ ಸಮಗ್ರ ತಿರಸ್ಕಾರದ ರೂಪವನ್ನು ಪಡೆಯಲಿಲ್ಲ, ಬದಲಾಗಿ ಇದು ಧಾರ್ಮಿಕ ಸಾಮಾಜಿಕ ಸುಧಾರಣಾ ಚಳುವಳಿಯ ರೂಪವನ್ನು ಪಡೆಯಿತು. ಆದರೆ ಇವೆಲ್ಲವೂ ನಡೆದಿದ್ದು ಸಂಪ್ರದಾಯಿಕ ಧಾರ್ಮಿಕ ಪರಿಭಾಷೆಯಲ್ಲಿಯೇ, ನಾರಾಯಣ ಗುರುಗಳಿಗೂ ಪೆರಿಯಾರರಿಗೂ ಇರುವ ವ್ಯತ್ಯಾಸ ಇಲ್ಲಿಯೇ ವಿಶಾಲಾರ್ಥದಲ್ಲಿ ಹಿಂದೂ ಧರ್ಮದ

---

೧. ಹೆಚ್.ಎಸ್.ರಾಮಚಂದ್ರೇಗೌಡ ರಸಪ್ರತಿಪಾದನೆ, ಕುವೆಂಪು ನಾಟಕ ವಿಹಾತ- ಸಂ.ದೇಜಗೌ, ಸಹ್ಯಾದ್ರಿ ಪ್ರಕಾಶನ, ಮೈಸೂರು, ಪುಟ. ೩೮

ಸಂವಿಧಾನದೊಳಗಿದ್ದು ಜಾತಿಪದ್ಧತಿಯ ಕೊಳಕು ರೂಪವನ್ನು ನಾರಾಯಣಗುರು ವಿರೋಧಿಸಿದರು.[೧]

**ಮೂಲದಲ್ಲಿ ಶಿವನರೂಪ:** ಪುರಾಣದಲ್ಲಿ ಶಿವನು ಸಂಪ್ರದಾಯಬದ್ಧವಾದ ಆಯುಧಗಳು, ಉಡುಪುಗಳನ್ನು ಹೊಂದಿದ್ದು, ಮೇಲ್ವರ್ಗದವರ ಆಶ್ರಯದಲ್ಲಿ ಇರುತ್ತಾನೆ, ಶಿವನು ತ್ರಿಶೂಲ, ಖಡ್ಗ, ಢಮರುಗ, ಶಂಖ, ಚರ್ಮಾಂಭರ, ಅಭಯಹಸ್ತ, ನೀಲಕಂಠ ಉಳ್ಳವನು, ಜಡೆಮುನಿಯೂ, ಗಂಗಾಧಾರಿಯೂ, ಚಂದ್ರಧಾರಕನೂ, ವಿಭೂತಿ-ಧಾರಕನೂ, ತ್ರಿನೇತ್ರನೂ, ಉರಗ ಭೂಷಿತನೂ, ರುದ್ರಾಕ್ಷಿಧಾರಕನೂ, ನಂದಿವಾಹನನೂ, ಪಾರ್ವತಿ ಪತಿಯೂ ಆಗಿರುತ್ತಾನೆ.

ಒಟ್ಟಿನಲ್ಲಿ ಕುವೆಂಪುರವರ ಸಾಮಾಜಿಕ ನಾಟಕಗಳಲ್ಲಿ 'ಜಲಗಾರ ಅದ್ವಿತೀಯ-ವಾಗಿದೆ. ಸಾಮಾನ್ಯ ಜಾಡಮಾಲಿಯನ್ನು ಕುರಿತು ಬರೆದ ನಾಟಕಗಳು ಕನ್ನಡದಲಿಲ್ಲ. ಈ ದೃಷ್ಟಿಯಿಂದ ಈ ನಾಟಕ ದಾಖಲೆಯಾಗಿದೆ. ಕರ್ತವ್ಯಪ್ರಜ್ಞೆ, ಕಾಯಕಪ್ರಜ್ಞೆಯಿಂದ ಸಾಮಾನ್ಯನೂ ಪೂಜನೀಯನಾಗುತ್ತಾನೆ ಎಂಬ ಅಂಶ ಈ ನಾಟಕದಲ್ಲಿ ವ್ಯಕ್ತವಾಗಿದೆ. ಇದು ೧೨ನೇ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯ ಪ್ರತಿಧ್ವನಿ ಎಂದೇ ಹೇಳಬಹುದು. ಈ ನಾಟಕದಲ್ಲಿ ಶಿವನು ಹೇಳುವ ಬೀದಿಗುಡಿಸುವವನ ಬಡವನೆದೆಯಲಿ, ಉಳುತಿರುವ ಒಕ್ಕಲಿಗನೆದೆಯಲಿ, ಎಲ್ಲಿ ಹೊಲೆಯನು ನನ್ನ ಕಾರ್ಯದಲ್ಲಿ ತೊಡಗಿಹನೋ ಅಲ್ಲಲ್ಲಿ ನಾನಿರುವೆ, ಕುಂಟರನು, ಕುರುಡರನು, ದೀನರನು, ಅನಾಥರನು ಕೈಹಿಡಿದು ಪೊರೆಯುತಿರುವೆ ಎಂದು ಹೇಳುವಲ್ಲಿ ನಾಟಕದ ತಿರುಳು ಅಡಗಿದೆ. ಈ ಸನ್ನಿವೇಶವನ್ನು ಸೃಷ್ಟಿಸುವಲ್ಲಿ ಕುವೆಂಪುರವರ ಸಾಮಾಜಿಕ ಕಾಳಜಿ, ಸಾಮಾಜಿಕ ಸಮಾನತೆಯ ಅಂಶಗಳನ್ನು ಗುರುತಿಸಬಹುದು.

ಶಿವನು ಜಲಗಾರನ ಬಳಿ ತಾನು ಜಗದ ಜಲಗಾರನೆಂದು ಹೇಳಿ ಪಂಡಿತರು ನನ್ನನ್ನು ಗಂಗೆ, ಹಣೆಗಣ್ಣು, ಹಾವು, ಬೂದಿಗಳನ್ನು ಬಳಿದರು ದೇವಾಲಯದಲ್ಲಿ ಇರಿಸಿದರೆಂದು ಹೇಳುವಲ್ಲಿ ಧರ್ಮ ಮತ್ತು ಧಾರ್ಮಿಕ ಆಚರಣೆ, ದೇವರ ವಿಚಾರದಲ್ಲಿ ಪುರೋಹಿತ ವರ್ಗದ ದಬ್ಬಾಳಿಕೆ, ಕಟ್ಟುಪಾಡುಗಳು, ಸಾಮಾನ್ಯ ಜನರಿಗೆ ಹೇಗೆ ತೊಡಕಾಗಿವೆ ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ಕುವೆಂಪುರವರ ಸಾಮಾಜಿಕ ಸಮಾನತೆ, ಜಾತಿ ವ್ಯವಸ್ಥೆ ವಿರೋಧವನ್ನು ಕಾಣಬಹುದು. ಇಲ್ಲಿ ಸಮಾಜದಲ್ಲಿ ಮೇಲ್ವರ್ಗದವರ ಧಾರ್ಮಿಕ ದಬ್ಬಾಳಿಕೆಯಿಂದ ಶಿವನೂ ಮುಕ್ತನಾಗಿಲ್ಲ ಎಂಬುದನ್ನು ವ್ಯಕ್ತಪಡಿಸಿದ್ದಾರೆ.

---

೧. ಶ್ರೀ ಕುವೆಂಪು– ಸಂಪಾದಕರು, ಜಿಎಸ್.ಶಿವರುದ್ರಪ್ಪ ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೮೦, ಪುಟ. ೧೦೯

೧೨ನೇ ಶತಮಾನದಲ್ಲಿ ಶಿವಶರಣರ ತತ್ವವಾದ ಕಾಯಕವೇ ಕೈಲಾಸ ಎಂಬುದನ್ನು ಪ್ರತಿಬಿಂಬಿಸಿದ ಏಕಮಾತ್ರ ನಾಟಕಕಾರರೆಂದರೆ ಶ್ರೀ ಕುವೆಂಪುರವರೇ ಆಗಿದ್ದಾರೆ. ಈ ತತ್ವವನ್ನು ಸಮಾಜದ ನೀಚಸ್ಥಾನದ ವ್ಯಕ್ತಿಯ ಬಾಯಿಂದಲೇ ಉದ್ಗರಿಸಿರುವುದು ಈ ನಾಟಕದ ವಿಶೇಷವಾಗಿದೆ. 'ಜಲಗಾರ'ದಲ್ಲಿ ದೈನಂದಿನ ಸಮಸ್ಯೆಗಳ ಸಮಕಾಲೀನ ಪ್ರಜ್ಞೆ ಸಮರ್ಥವಾಗಿ ಮೂಡಿಬಂದಿದೆ. ದೇಶದ ಬೆನ್ನೆಲುಬಾದ, ಎಲ್ಲರಿಗೂ ಅನ್ನ ನೀಡುವ, ರಾಷ್ಟ್ರದ ಅಳಿವು ಉಳಿವಿನ ಸೂತ್ರದಾರನಾದ ಸಾಹಿತ್ಯ ಸಂಸ್ಕೃತಿಯ ಪೋಷಕನಾದ, ರೈತನನ್ನು ನೇಗಿಲಯೋಗಿ ಎಂದು ಉದಾತ್ತೀಕರಿಸಿದ್ದಾರೆ ಎಂದು ಜಿ.ಜಿ.ಮಂಜುನಾಥನ್‌ರವರು ತಮ್ಮ ಸಮಕಾಲೀನ ಪ್ರಜ್ಞೆ ಲೇಖನದಲ್ಲಿ ಹೇಳುತ್ತಾರೆ.[೧]

ಜಲಗಾರ ನಾಟಕದ ರಚನೆಯನ್ನು ಕುವೆಂಪುರವರು ೧೯೨೮ರಲ್ಲಿ ರಚಿಸಿದರೂ ಜಲಗಾರ ಸಾಮಾಜಿಕ ಬದುಕಿನಲ್ಲಿ ಬದಲಾವಣೆಯಾಗದಿರುವುದು ನಮ್ಮ ಸಮಾಜವು ಅಪವಾದವಾಗಿದ್ದು, ಇಂತಹ ಪರಿಸ್ಥಿತಿಯಲ್ಲಿ ಕುವೆಂಪುರವರಂತಹ ಸಾಮಾಜಿಕ ಕಾಳಜಿಯುಳ್ಳವರು, ಹೊಸ ಸಮಾಜ ಪರಿವರ್ತನೆಯ ತಲೆಮಾರಿನ ಜನರ ಅಗತ್ಯ ಇಂದಿಗೆ ಪ್ರಸ್ತುತವಾಗಿದೆ.

**ನಾಟಕ : ವಾಲ್ಮೀಕಿಯ ಭಾಗ್ಯ**

ಗಂಗಾತೀರದ ಅರಣ್ಯದಲ್ಲಿ ಗರ್ಭಿಣಿಯಾದ ಸೀತಾದೇವಿಯು ಲಕ್ಷ್ಮಣನೊಡ ಗೂಡಿ ಸಡಗರದಿಂದ ನಡೆದು ಬರುತ್ತಾಳೆ. ಗಂಗಾವನದ ಸೌಂದರ್ಯ, ಹಸಿರುವನ, ನೇಸರ, ಜಿಂಕೆಗಳು, ಹೆಮ್ಮರಗಳು, ರವಿಯ ಪ್ರತಿಬಿಂಬ, ಮುಂಗಾಲುಗಳನ್ನು ನೆಲೆದಲ್ಲಿ ಊರಿ ಹಿಂಗಾಲಿನಲ್ಲಿ ನಿಂತ ನೀರಕುಡಿಯುತ್ತಿರುವ ಜಿಂಕೆಯ ಚೆಲುವು, ಅದರ ಮರಿಯ ಬಾಲಚಿಮ್ಮುವಿಕೆ ಹೀಗೆ ಇಡೀ ವನದ ಸೌಂದರ್ಯವನ್ನು ಆಸ್ವಾದಿಸುತ್ತಾ ಆಯಾಸವಾದರೂ ಉತ್ಸಾಹದಲ್ಲಿ ನಡೆಯುತ್ತಾ ಸಾವಿತ್ರಿಯೊಂದಿಗೆ ಹರಟುತ್ತಾ ಸಾಗಿ ಬರುತ್ತಾಳೆ.

ಲಕ್ಷ್ಮಣನು ಸೀತೆಯ ಜೊತೆಯಲ್ಲಿ ಸಮನಾಗಿ ನಡೆಯಲಾರದೆ ಹಿಂದುಳಿದಿರು ವುದನ್ನು ಕಂಡು ಸೀತಾದೇವಿಯು ಕಾರಣವನ್ನು ಕೇಳಲು ಬಲಕಣ್ಣಿಗೆ ಹುಳುವೊಂದು ಬಂದಿದ್ದರಿಂದ ಅದೇನೆಂದು ನೋಡುತ್ತಾ ನಿಲ್ಲುವುದರಲ್ಲಿ ನೀವು ಮುಂದಾದಿರಿ ಎನ್ನುವನು. ಇಲ್ಲಿ ಲಕ್ಷ್ಮಣನು ಹಿಂದುಳಿದಿದ್ದಾನೆ ಎಂಬುದು ಮುಂದಿನ ಘೋರ ಘಟನೆಗೆ ತಾನೇ ಮುನ್ನುಡಿ ಬರೆಯುವುದು ಅವನಿಗೆ ಸ್ಪಷ್ಟವಾಗಿತ್ತು. ಆದ್ದರಿಂದಾಗಿ ಇಂತಹ ದುರ್ಘಟನೆಗೆ ಅವನ ಕಾಲು ಮುಂದೆ ಸಾಗದೆ ತೊಳಲುತ್ತಿತ್ತು.

೧. ಕುವೆಂಪು ನಾಟಕ ವಿಹಾರ–ಸಂ.ದೇಜಗೌ, ಸಹ್ಯಾದ್ರಿ ಪ್ರಕಾಶನ, ೧೯೭೭, ಪುಟ. ೬೧

ಸೀತಾದೇವಿಯ ಕರಂಡಕವನ್ನು ಲಕ್ಷ್ಮಣನು ಹೊತ್ತೊಯ್ಯುತ್ತಿದ್ದು ಅದರಲ್ಲಿ ಋಷಿಗಳು ಮತ್ತು ಅವರ ಪತ್ನಿಯರಿಗೆಂದು ಪರಿಮಳ ದ್ರವ್ಯಗಳು, ದಿವ್ಯಾಂಬರಗಳು ಆಶ್ರಮದ ಕಿರಿಯವರಿಗೆಂದು ನಲ್ಲುಣಿಸುಗಳು ಹಾಗೂ ಶ್ರೀರಾಮಚಂದ್ರನ ಪಾದುಕೆಗಳು ಇದ್ದವು.

ಸೌಮಿತ್ರಿಯು ತನ್ನ ಮನಸ್ಸಿನಲ್ಲೇ ಹೊಯ್ದಾಟವನ್ನು ಅನುಭವಿಸುವನು. ಶ್ರೀರಾಮನಾಜ್ಞೆಯನ್ನು ಹೇಗೆ ತಿಳಿಸಲಿ? ಯಾವ ಬಾಯಿಂದ ಹೇಳಲಿ? ಅಯ್ಯೋ! ರಾಘವೇಶ್ವರ ಕೋಮಲೆಯ ಕೊಲೆ ಕೆಲಸಕ್ಕೆ ನನ್ನನ್ನು ಕಳುಹಿಸಿರುವೆ, ಕರುಣೆ ಇಲ್ಲದ ಈ ಬಾಳು ಹಾಳಾಗಿ ಹೋಗಲಿ, ತನ್ನ ಕೀರ್ತಿಯ ಕೋಡಿಗೆಂದು ನಿರಪರಾಧಿಯನ್ನು ಬಲಿಕೊಡುವುದು ತರವೇ? ಗೂಬೆನಿಂದಿಸಿತೆಂದು ಬೆಳದಿಂಗಳನ್ನು ಅಳಿಯುವವರೇ? ಹಾಳು, ಅಗಸನೊಬ್ಬನು ಮುಳಿಸಿನಿಂದ ಆಲೋಚಿಸದೆ ನುಡಿದನೆಂದು ಲೋಕಮಾತೆ-ಯನ್ನು ಅಡವಿಗಟ್ಟುವುದು ಯಾವ ಧರ್ಮ? ಧರ್ಮದ ಹೆಸರಿನಲ್ಲಿ ಲೋಕದಲ್ಲಿ ಇಂತಹ ಕೃತ್ಯವನ್ನು ಮಾಡುವರೇ? ಎಂದು ತನ್ನನ್ನೂ, ಶ್ರೀರಾಮನ ನಿರ್ಧಾರವನ್ನೂ ಹಾಳು ಅಗಸನನ್ನು, ಧರ್ಮವನ್ನು, ಲಕ್ಷ್ಮಣನು ಪ್ರಶ್ನಿಸುತ್ತಾ ಗೊಂದಲಕ್ಕೆ ಒಳಗಾಗಿ ತನ್ನನ್ನು ತಾನೇ ಶಪಿಸಿಕೊಳ್ಳುವನು. ಇಲ್ಲಿ ಲಕ್ಷ್ಮಣನು ಅತ್ತ ಶ್ರೀರಾಮನ ಆಜ್ಞೆಯನ್ನು ಪಾಲಿಸಬೇಕು, ಇತ್ತ ಸೀತಾಮಾತೆಗೆ ಸತ್ಯವನ್ನು ಹೇಗೆ ಹೇಳಿ ಅಡವಿ ಪಾಲು ಮಾಡಲಿ ಎಂಬ ದ್ವಂದ್ವದಲ್ಲಿ ಸಿಲುಕಿ ನರಳುವನು.

ಸೌಮಿತ್ರಿಯ ಈ ವರ್ತನೆಯನ್ನು ಗುರುತಿಸಿದ ಸೀತಾದೇವಿಯು ಕಾರಣವನ್ನು ಕೇಳಲು ಲಕ್ಷ್ಮಣನು ದುಂಬಿಗಳ ಆಟದಿಂದ ಕೆದರಿದ ಪರಾಗವು ಕಣ್ಣಿಗೆಬಿದ್ದಿದ್ದರಿಂದ, ಮುಖವು ಬಾಡಿದೆ ಎಂದು ತಿಳಿಸುವನು ಹಾಗೂ ತಾನು ವನದ ದಾರಿಯನ್ನು ತಪ್ಪಿದನೇನೋ? ಎನಿಸುತ್ತದೆ ಎಂದು ಕಳವಳಗೊಂಡನು. ಇದರಿಂದ ವಿಚಲಿತಳಾದ ಸೀತೆಯು ಈ ಕಾಡು ಅಟನಕಸವಳವಾಗಿದೆ. ಪುಣ್ಯಾಶ್ರಮದ ಜಟಿಗಳನ್ನು ಕಾಣೆ, ಮುನಿವಧುಗಳ ಸುಳಿವಿಲ್ಲ, ವಟುಗಳೊಬ್ಬರ ಸುಳಿವಿಲ್ಲ. ಶ್ರುತಿಘೋಷಗಳಿಲ್ಲ, ಗಾಳಿಯಲ್ಲಿ ಹೋಮ ಧೂಮ ಗೋಚರಿಸದು, ನಾನಂದು ಕಂಡ ಮುನಿಪೋತ್ತಮರ ವನ ಆಶ್ರಮಗಳೆಲ್ಲಿ? ಸಿದ್ಧಾಶ್ರಮಂಗಳ ಮಂಗಳ ಸ್ಥಳಗಳೆಲ್ಲಿ? ಸುಹುವಿಗಳ ಕಂಪಿನಿಂದ ಹೊಗೆ ಬರುವ ಅ ಚಲುವಿನ ವನಗಳ ಸುಳಿವೆಲ್ಲಿ? ಎಂದು ರೋಧಿಸುತ್ತಾ ಈ ಕಟ್ಟಡವಿಗೆ ಏಕೆ ಕರೆತಂದೆ? ಎಂದು ಸೌಮಿತ್ರಿಯನ್ನು ಕೇಳಿದಳು.

ಸೌಮಿತ್ರಿಯು ಮನಸ್ಸು ಮತ್ತೆ ಹೊಯ್ದಾಟದಲ್ಲಿ ಸಿಲುಕುವುದು. ಗರ್ಭಿಣಿಯಾದ ಮಾತೆಯನ್ನು ಸುಳ್ಳು ಹೇಳಿ, ಇನ್ನೆಷ್ಟು ಹೊತ್ತು ಹೀಗೆ ಸುತ್ತಿಸುತ್ತಿರಲಿ? ಹೇ ರಾಮಚಂದ್ರಾ; ಹಾ ವಿಧಿ! ಎಂದು ತನ್ನ ಮನಸ್ಸಿನಲ್ಲಿ ತೊಳಲಾಡುವನು. ಇಷ್ಟರಲ್ಲೇ

ಸೀತಾದೇವಿಗೆ ಮಾರ್ಗಮಧ್ಯದಲ್ಲಿ ಮಿಗವೊಂದರ ಅಪಶಕುನ ಉಂಟಾಗುತ್ತದೆ. ಬಲಕಣ್ಣು ಅದುರುತ್ತದೆ. ಈ ದುರ್ನಿಮಿತ್ತಗಳನ್ನು ನೋಡಿ ಗಾಬರಿಯಾಗುತ್ತಾಳೆ. ಈ ಅಮಂಗಳದ ಸೂಚನೆಗಳು ಸೀತಾದೇವಿಯು ಮುಂದಿನ ಘೋರ ಸಂಕಟಕ್ಕೆ ಮುನ್ನುಡಿಯಾಗಿದ್ದವು. ಈ ವೇಳೆಗಾಗಲೇ ಬಸಿರಬೇನೆಯಿಂದ ಕಡುನೊಂದು ವನದಲ್ಲಿ ನಡೆದೂ ನಡೆದೂ ಆಯಾಸಗೊಂಡಿದ್ದ ಸೀತಾದೇವಿಗೆ ಕಲ್ಲೆಡಗಿ, ಮುಳ್ಳು ಚುಚ್ಚಿ ಕಾಲಿನಿಂದ ನೆತ್ತರು ಸುರಿದು ನಿತ್ರಾಣಳಾಗಿ ಮುಂದೆ ನಡೆಯಲಾರದೆ ಅಯೋಧ್ಯೆಗೆ ಹಿಂದಿರುಗುವಾ ನಡೆ ಎಂದು ತನ್ನ ನಿರ್ಬಲತೆಯನ್ನು ವ್ಯಕ್ತಪಡಿಸುವಳು.

ಸೌಮಿತ್ರಿಯು ತನ್ನನ್ನು ತಾನು ಶಪಿಸಿಕೊಳ್ಳುತ್ತಾ ನಾವಿಬ್ಬರೂ ಅಯೋಧ್ಯೆಗೆ ಮರಳಲಾಗದು, ನಾನಾಗಲೀ, ನೀವಾಗಲೀ ಇಬ್ಬರೊಳಗೆ ಒಬ್ಬರೇ ರಾಜಧಾನಿಗೆ ಮರಳಬೇಕೆಂತೆ ಇದು ರಾಘವೇಶ್ವರನ ಕಟ್ಟಾಣೆ, ಎಂದು ಇದ್ದ ವಿಷಯವನ್ನು ತಿಳಿಸಲು ಪ್ರಯತ್ನಿಸುವನು. ಸೀತಾದೇವಿಯು ನಾವು ಅರಣ್ಯದಿಂದ ಹಿಂದುರುಗಿ ಬಂದಿರುವ ವಿಷಯವನ್ನು ಶ್ರೀರಾಮನಲ್ಲಿ ಸಮರ್ಥಿಸುವೆನೆಂದು ಸೌಮಿತ್ರಿಗೆ ಧೈರ್ಯ ತುಂಬಲು ಪ್ರಯತ್ನಿಸುವಳು.

ಸೌಮಿತ್ರಿಯು ಸೀತಾದೇವಿಯನ್ನು ಕುರಿತು ನಾನು ನಿಮ್ಮೊಡನೆ ಅಯೋಧ್ಯೆಗೆ ಮರಳಲಾರೆ! ಎನ್ನಲು ಹಾಗಾದರೆ 'ನನ್ನನು ಇಲ್ಲಿ ಬಿಟ್ಟು ನೀನೊಬ್ಬನೇ ಹೋಗು'! ಎಂದು ಸೀತಾದೇವಿಯು ಸಿಟ್ಟಿನಿಂದ ಹೇಳುವಳು. ಲಕ್ಷ್ಮಣರು ಹಾ ತಾಯೇ, ಶ್ರೀರಾಮನಂತೆ ಆಡದಿರಿ! ಎನ್ನಲು ಸೀತೆಯು ಆತಂಕದಿಂದ ಏನೆಂದು ಪೀಡಿಸಲು ಲಕ್ಷ್ಮಣನು ಒಲ್ಲದ ಮನಸ್ಸಿನಿಂದ, ದೇವೀ ನಿನಗೆ ಅಪವಾದ ಆವರಿಸಿದ್ದರಿಂದ ನಿನ್ನನ್ನು ಒಲ್ಲದೆ ಶ್ರೀರಾಮನು ಕಾಡಿಗೆ ಬಿಟ್ಟು ಬಾ ಎಂದು ನನಗೆ ಆಜ್ಞಾಪಿಸಿದ್ದು, ಆ ಪ್ರಭುವಿನ ಆಜ್ಞೆಯನ್ನು ಮೀರದೆ ಈ ಕಾಡಿಗೆ ನಿಮ್ಮನ್ನು ಕರೆತಂದೆ ಎಂದು ತನ್ನ ಅಸಹಾಯಕತೆ-ಯನ್ನು ವ್ಯಕ್ತಪಡಿಸುವನು.

ಈ ದುರ್ವಾರ್ತೆಯಿಂದ ಆಘಾತಗೊಂಡ ಸೀತಾದೇವಿಯು ಬೆಚ್ಚಿ ಅಯ್ಯೋ ಕೆಟ್ಟೆ! ಎಂದು ಮೂರ್ಛೆ ಹೋಗಿ ಸೌಮಿತ್ರಿಯ ಉಪಚಾರದಿಂದ ಎಚ್ಚೆತ್ತು ನಾನು ಅನಾಥಳಾದೆ, ಊರೊಳಗೆ ಮಾರಿ ಇದೆ ಎಂದು ಮನೆಯ ಹೋರಿಯನ್ನು ಮಾರುವರೇ? ನಾನಿಲ್ಲದೆ ಹೇಗೆ ಅರಮನೆಯಲ್ಲಿರುವೆ? ಎಂತು ಪಟ್ಟವಣೆಯನ್ನು ಏರುವೆ? ಹಾ ರಾಘವಾ, ನಿನ್ನಡಿಗಳಾಣೆ ಎನ್ನೊಳು ಕೊರತೆಯಿದ್ದರೆ ಮನ್ನಿಸಿ ಕಾಯು ನಿನ್ನನ್ನು ಕೈಮುಗಿದು ಬೇಡುವೆ, ಎಂದು ಅಂಗಲಾಚುವಳು. ಶ್ರೀರಾಮನನ್ನು ಕುರಿತು ಖಡ್ಗವನ್ನು ಕೊಟ್ಟು ತನ್ನ ಅರಸಿಯನ್ ಕೊಯ್ ಎನ್ನದೆ ಅಡವಿಗೆ ಕಳುಹಿದನೇ? ಅವನು ಕಾರುಣ್ಯನಿಧಿಯಲ್ಲವೇ? ಎಂದು ಧನಾತ್ಮಕ ಚಿಂತನೆಯನ್ನು ಮಾಡುವಳು.

ಇಲ್ಲಿ ಸೀತಾದೇವಿಯು ಶ್ರೀರಾಮನಲ್ಲಿ ಇಟ್ಟಿದ್ದ ಪತಿಭಕ್ತಿ ಮತ್ತು ಆಕೆಯ ಸಜ್ಜನಿಕೆಯು ಅವಳ ಈ ಮಾತುಗಳಲ್ಲಿ ಅಡಕವಾಗಿದೆ.

ಸೀತಾದೇವಿಯ ವನವಾಸಕ್ಕೆ ಲಕ್ಷ್ಮಣನು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುವನು. ಹಾಗೆಯೇ ಶ್ರೀರಾಮನು ಭರತ, ಶತ್ರುಘ್ನರ ವಿರೋಧವನ್ನೂ ಹನುಮಂತ, ಜಾಂಬವ, ಸುಗ್ರೀವರ ಸಲಹೆಯನ್ನು ಗಣನೆಗೆ ತೆಗೆದುಕೊಳ್ಳದೇ ನನ್ನನ್ನು ಈ ಘೋರ ಕಾರ್ಯಕ್ಕೆ ಇಳಿಸಿದನು ಎಂದು ತನ್ನ ಮನಸ್ಸಿನ ತಾಕಲಾಟವನ್ನು ಸೀತಾದೇವಿಗೆ ಮನದಟ್ಟು ಮಾಡಲು ಪ್ರಯತ್ನಿಸುವನು. ನಂತರ ಸೀತಾದೇವಿಯನ್ನು ರಕ್ಷಿಸುವಂತೆ ವನದ ಚರಾಚರ ವಸ್ತು, ಜೀವಿಗಳಲ್ಲಿ ಬೇಡುವನು ಸೀತಾದೇವಿಯ ಒತ್ತಡಕ್ಕೆ ಮಣಿದು, ಒಲ್ಲದ ಮನಸ್ಸಿನಿಂದ ಕಾಡಿನಿಂದ ಹೊರ ಹೋಗುವನು.

ಈ ನಾಟಕ ಒಂದು ರೀತಿ ಸೀತೆಯ ಅಸಹಾಯಕದ ಪರಿಸ್ಥಿತಿಯ ಜೊತೆಗೆ ರಾಮನ ವ್ಯಕ್ತಿತ್ವದ ವಿಮರ್ಶೆಯೂ ಹೌದು, ಇಲ್ಲಿ ಮುಖ್ಯವೆನಿಸಿದ ಪಾತ್ರ ಲಕ್ಷ್ಮಣನ ಪಾತ್ರ, ಕರ್ತವ್ಯ ಮತ್ತು ಮಾನವೀಯತೆ ದ್ವಂದ್ವದಲ್ಲಿ ಸಿಕ್ಕಿ ಸಂಕಟ ಪಡುವ ಅವನ ಸ್ಥಿತಿ ವಾಸ್ತವವನ್ನು ಎದುರಿಸುವುದು, ಎದುರಿಸಲೇಬೇಕಾದಾಗ ಸತ್ಯವನ್ನು ಮುಖಾಮುಖಿ-ಯಾಗುವುದು ಎಷ್ಟು ಕಷ್ಟಕರ ಎಂಬ ಲಕ್ಷ್ಮಣನ ಸ್ಥಿತಿ ಈ ನಾಟಕದಲ್ಲಿ ರೂಪತಾಳಿದೆ. ಇತ್ತ ಸೀತಾದೇವಿಯು ಶ್ರೀರಾಮನ ಅಗಲಿಕೆಯಿಂದ ರೋದನಕ್ಕೆ ಒಳಗಾಗುವಳು, ಮತ್ತೊಂದೆಡೆ ತನ್ನ ಪ್ರಾಣಹರಣಕ್ಕೆ ಮನಸ್ಸು ಮಾಡಿ ಭ್ರೂಣಹತ್ಯಾ ದೋಷಕ್ಕೆ ಹೆದರಿ ಶ್ರೀರಾಮ ನಾಮಸ್ಮರಣೆಯೇ ದಿಕ್ಕೆಂದು ಬಗೆದು ರಾಮಾ! ರಾಮಾ! ಎಂದು ಕೂಗುವಳು.

ಇದೇ ವೇಳೆಗೆ ಮಹರ್ಷಿ ವಾಲ್ಮೀಕಿಯ ಪ್ರವೇಶವಾಗುತ್ತದೆ. ಸೀತಾದೇವಿಯ ಆರ್ತನಾದವನ್ನು ಕೇಳಿದಂತಾಗಿ ಧ್ವನಿಯನ್ನು ಅನುಸರಿಸುತ್ತಾ ನಡೆಯುವನು. ಈ ರಾಮನಾಮದ ಹಿಂದೆ ಮಹರ್ಷಿ ವಾಲ್ಮೀಕಿಯು ತನ್ನ ಹಿಂದಿನ ವೃತ್ತಾಂತವನ್ನು ನೆನೆಯುವನು, ಸೀತಾದೇವಿಯನ್ನು ನೋಡಿ ಎಲೆ ತಾಯೆ ನೀನು ಯಾರು? ಈ ಘೋರ ವನಕ್ಕೆ ಒಬ್ಬಳೆ ಹೇಗೆ ಬಂದೆ? ಎಂದು ಕೇಳಲು ಸೀತಾದೇವಿಯು ವಾಲ್ಮೀಕಿಯನ್ನು ನೋಡಿ ಬೆಚ್ಚಿ ಋಷಿಯ ವೇಷದಲ್ಲಿ ಬಂದ ರಾವಣನೆಂದು ಬಗೆದು ಹಿಂಜರಿದು ದೂರಸರಿ, ಶ್ರೀರಾಮನಾಣೆ ಎನ್ನುವಳು, ಅದಕ್ಕೆ ವಾಲ್ಮೀಕಿಯು ಶ್ರೀರಾಮನಾಣೆ ನಿನ್ನಾಣೆ ನಾನು ರಾಕ್ಷಸನಲ್ಲ ನಾನು ವಾಲ್ಮೀಕಿ ಎಂದು ಪ್ರಮಾಣೀಕರಿಸುವನು. ಸತ್ಯವನ್ನು ಅರುಹಿದ ನಂತರ ಸೀತಾದೇವಿಯು ವಾಲ್ಮೀಕಿ ಮಹರ್ಷಿಯಲ್ಲಿ ಮನ್ನಿಸೆಂದು ಭಿನ್ನವಿಸಿ ತನಗೆ ಒದಗಿ ಬಂದಿರುವ ಸಂಕಷ್ಟವನ್ನು ಶ್ರೀರಾಮನಾಜ್ಞೆಯನ್ನು ತಿಳಿಸಿ ಎನಗೆ ದಾರಿತೋರೆಂದು ದೈನ್ಯದಿಂದ ಬೇಡುವಳು. ವಾಲ್ಮೀಕಿಯು ದೇವಿ; ಬಿಡು ಶೋಕವನ್ನು ಪುತ್ರಯುಗವನ್ನು ಪಡೆಯುವೆ, ಭಾವಿಸದಿರು, ಇನ್ನು ಸಂದೇಹವನ್ನು, ಜನಕನಿಗೆ ನಾವು ಅನ್ಯರಲ್ಲ, ನಮ್ಮ ಆಶ್ರಮಕ್ಕೆ ಬಂದು ನೀ

ಸುಖವಾಗಿರುವೆ ಬಾ ನಿನ್ನ ಬಸಿರಿ ಬಯಕೆಗಳನ್ನು ಈಡೇರಿಸಿ ನಿನ್ನನ್ನು ನೋಡಿಕೊಳ್ಳುವೆವು ಅಂಜದೆ ಬಾ ಎಂದು ಕರೆಯುವನು.

ಸೀತಾದೇವಿಯು ಮಹರ್ಷಿ ವಾಲ್ಮೀಕಿಯ ಕರೆಗೆ ಓಗೊಟ್ಟು ಹೊರಡಲು ಸಿದ್ಧವಾಗಿ ಮಹರ್ಷಿಯ ಪಾದಗಳಿಗೆ ಎರಗುವಳು, ವಾಲ್ಮೀಕಿಯು ಸೀತೆಯನ್ನು ಮೆಲ್ಲನೆ ಹಿಡಿದೆತ್ತಿ 'ತಾಯೆ ಮೇಲೇಳು, ನಿನಗೆ ಎಲ್ಲಾ ಒಳ್ಳೆಯದಾಗುವುದು? ನೀನು ನನ್ನ ಮಹಾಕಾವ್ಯದ ಸವಿಗಣ್ಣು, ಕಥಾನಾಯಕಿಯಾಗಿದ್ದು ಇದು ವಾಲ್ಮೀಕಿಯ ಭಾಗ್ಯವಾಗಿದೆ ಎಂದು ಸಂತೈಸಿ ತನ್ನ ಆಶ್ರಮಕ್ಕೆ ಕರೆದೊಯ್ದನು.

ಹೀಗೆ ಸೀತಾದೇವಿಯ ವನಾಗಮನದಿಂದಾಗಿ ಸೀತಾದೇವಿಯ ಮತ್ತು ಅವಳ ಗರ್ಭ ಸಂಜಾತರಾದ ಲವ-ಕುಶರ ಪಾಲನೆಯ ಭಾಗ್ಯವು ದೊರೆತು ಮಹರ್ಷಿ ವಾಲ್ಮೀಕಿಗೆ ರಾಮಾಯಣವನ್ನು ರಚಿಸಲು ಅವಕಾಶ ದೊರೆತು ವಾಲ್ಮೀಕಿ ಪಾಲಿಗೆ ಸೌಭಾಗ್ಯದ ಕ್ಷಣವೊಂದು ದೊರೆತು ವಾಲ್ಮೀಕಿಯ ಭಾಗ್ಯವಾಯಿತು.

ವಾಲ್ಮೀಕಿಯ ಭಾಗ್ಯ ನಾಟಕ ಏಕಾಂತ ನಾಟಕದ ಏಕಮುಖವಾದ ಓಟ, ಪಾತ್ರ ಸ್ಥಳ ಕಾಲೈಕೆಗಳು ಈ ನಾಟಕದಲ್ಲಿ ಬಹಳ ಚೆನ್ನಾಗಿ ರೂಪುಗೊಂಡಿದೆ. ಒಂದು ಕಡೆ ಸೀತೆಯ ಸಂಕಟ ಇನ್ನೊಂದು ಕಡೆ ಲಕ್ಷ್ಮಣನ ಒಳತೋಟಿ ಬಹಳ ಪರಿಣಾಮಕಾರಿ-ಯಾಗಿ ಚಿತ್ರಿತವಾಗಿದೆ. ಇದೆಲ್ಲಕ್ಕೂ ಕಾರಣವಾದ ರಾಮನ ನಿರ್ಧಾರ ಒಂದು ವಿವಾದಾಸ್ಪದವಾದ ವಿಚಾರವಾಗಿ ಒಬ್ಬೊಬ್ಬರು ಒಂದೊಂದು ರೀತಿ ಅದಕ್ಕೆ ಸಮಾಧಾನ ಹೇಳಲು ಪ್ರಯತ್ನಿಸಿದ್ದಾರೆ.[೧]

ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ

ಸೀತಾಪರಿತ್ಯಾಗ ವಸ್ತುವನ್ನು ನಾಟಕಕ್ಕೆ ಅಳವಡಿಸಿರುವ ಕುವೆಂಪು ಅವರ ನಾಟಕೀಯ ಕೌಶಲ್ಯ ಶ್ಲಾಘನೀಯ. ಲಕ್ಷ್ಮಣ, ಸೀತೆ, ವಾಲ್ಮೀಕಿ ಮೂರೇ ಪಾತ್ರಗಳು, ಒಂದೇ ವಂಶಗಳ ಕೇವಲ ಸ್ವಲ್ಪ ಕಾಲದ ಅವಧಿಯಲ್ಲಿ ನಡೆಯುವ ಒಂದೇ ಸನ್ನಿವೇಶ ಅಷ್ಟೇ ಪರಿಮಿತ ವ್ಯಾಪ್ತಿಯಲ್ಲಿ ಕಾಣುವ ಪಾತ್ರರಚನೆ, ಮನೋವಿಶ್ಲೇಷಣೆ, ಕುತೂಹಲಕರವಾದ ಬೆಳವಣಿಗೆ ಮತ್ತು ಮುಕ್ತಾಯ ಪರಿಣಾಮಕಾರಿಯಾಗಿವೆ.[೨]

ಒಟ್ಟಿನಲ್ಲಿ ರಾಮಾಯಣದ ಸೀತಾಪರಿತ್ಯಾಗ ಸಂದರ್ಭವನ್ನು ಕುವೆಂಪು ತಮ್ಮದೇ ಆದ ಸನ್ನಿವೇಶವನ್ನು ಸೃಷ್ಟಿಸುವುದರ ಮೂಲಕ ವಾಲ್ಮೀಕಿಯ ಭಾಗ್ಯವೆಂದು

---

೧. ವಾಲ್ಮೀಕಿಯ ಭಾಗ್ಯ ತಿಪ್ಪೇರುದ್ರಸ್ವಾಮಿ, ಗಂಗೋತ್ರಿ, ಕುವೆಂಪು ಅಭಿನಂದನ ಸಮಿತಿ ೧೯೩೧

೨. ವಾಲ್ಮೀಕಿಯ ಭಾಗ್ಯ- ಹೆಚ್.ತಿಪ್ಪೇರುದ್ರಸ್ವಾಮಿ, ಪುಸ್ತಕದ ಹೆಸರು ಗಂಗೋತ್ರಿ, ಕುವೆಂಪು ಅಭಿನಂದನ ಸಮಿತಿ-೧೯೩೧

ಕರೆದಿದ್ದಾರೆ. ಇಲ್ಲಿ ಕುವೆಂಪುರವರ ಹೊಸತನವನ್ನು ಸಾಂದರ್ಭಿಕ ನಾವಿನ್ಯತೆಯನ್ನು ಕಾಣಬಹುದು.

ಸೀತಾಪರಿತ್ಯಾಗ ಸನ್ನಿವೇಶವನ್ನು ಚಿತ್ರಿಸುತ್ತಾ ಸೀತಾದೇವಿಯ ಅಸಹಾಯಕ ಸ್ಥಿತಿ, ಅವಳ ರೋಧನವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿ ಆ ಮೂಲಕ ಇಂದಿನ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಸ್ಥಿತಿಯನ್ನು ಪ್ರಕಟಿಸಿದ್ದಾರೆ. ಇಲ್ಲಿ ಕುವೆಂಪುರವರ ಸ್ತ್ರೀಪರ ಧೋರಣೆಯನ್ನು ಗುರುತಿಸಬಹುದು.

ಅದೇ ರೀತಿ ತನ್ನ ಭವಿಷ್ಯದ ಘೋರ ಸ್ಥಿತಿಯನ್ನು ಅರಿಯದ ಮುಗ್ಧಮನಸ್ಸಿನ ಸೀತೆಯ ಚಿತ್ರಣ, ರಾಮಾಜ್ಞೆಯ ಮೇರೆಗೆ ಕಾನನಕ್ಕೆ ಮಾತೆಯೊಡಗೂಡಿ ಬಂದ ಸೌಮಿತ್ರಿಯು, ವಿಷಯವನ್ನು ಸೀತೆಗೆ ತಿಳಿಸುವಲ್ಲಿ ಪಡುವ ಉಭಯ ಸಂಕಟಗಳು ನಾಟಕದ ಭಾಗದಲ್ಲಿ ಪ್ರೌಢಿಮೆಯಾಗಿ ಹೊರಬಂದಿದ್ದು ಇದು ಕುವೆಂಪುರವರ ಪರಿಪಕ್ವ ನಾಟಕ ನೈಪುಣ್ಯತೆಗೆ ಹಿಡಿದ ಕೈಗನ್ನಡಿಯಾಗಿವೆ ಈ ಭಾಗವೇ ನಾಟಕದ ಬಹುಮುಖ್ಯ ಹಂತಗಳಾಗಿದ್ದು ವಿಶೇಷತೆಯಿಂದ ಕೂಡಿವೆ.

ಹೀಗೆ ಕುವೆಂಪು ರಾಮಾಯಣ ಮಹಾಕಾವ್ಯದ ರಚನಾ ಕರ್ತನಾದ ವಾಲ್ಮೀಕಿ ಮಹರ್ಷಿಗೆ ತನ್ನ ಕಾವ್ಯದ ಕಥಾನಾಯಕಿಯಾದ ಸೀತಾದೇವಿಗೆ ಆಶ್ರಯ ನೀಡಿ ಸಲುಹಿದಂತಹ ಸಂದರ್ಭವನ್ನು ಸೃಷ್ಟಿಸುವುದರ ಮೂಲಕ ವಾಲ್ಮೀಕಿಯನ್ನು ಮತ್ತಷ್ಟು ಪೂಜನೀಯನನ್ನಾಗಿ ಮಾಡಿದ್ದಾರೆ. ಮತ್ತು ಸೀತಾಪರಿತ್ಯಾಗವನ್ನು ಅರ್ಥಪೂರ್ಣ ವಾಗಿಸಿದ್ದಾರೆ. ಇಲ್ಲಿ ಕುವೆಂಪುರವರ ಪ್ರತಿಭೆ, ಸಾಮಾಜಿಕ ಕಾಳಜಿ, ಸ್ತ್ರೀಪರ ಧೋರಣೆ ಸನ್ನಿವೇಶಗಳ ಸಮಯಪ್ರಜ್ಞೆ, ಪಾತ್ರಗಳ ಉದಾತ್ತೀಕರಣ ಮುಂತಾದ ಕೌಶಲ್ಯ ಯುಕ್ತತೆಯನ್ನು ಕಾಣಬಹುದು.

ಒಟ್ಟಿನಲ್ಲಿ ಈ ನಾಟಕದಲ್ಲಿ ಅಂತಹ ವಿಶೇಷತೆಯನ್ನೇನೂ ಗುರುತಿಸುವುದಿಲ್ಲ ವಾದರೂ ನಾಟಕ ಸಹೃದಯರ ಮನಸ್ಸಿಗೆ ನೇರವಾಗಿ ಮುಟ್ಟುವಲ್ಲಿ ಯಶಸ್ವಿಯಾಗಿದೆ ಎಂದು ಹಾ.ತಿ.ಕೃಷ್ಣೇಗೌಡರು ಹೇಳಿದರು.[೧]

**ಮೂಲ ಕಥಾವಸ್ತು**

ಸೀತಾ ಪರಿತ್ಯಾಗದ ಕಥೆ ಮೊದಲು ಕಾಣಿಸಿಕೊಳ್ಳುವುದು ವಾಲ್ಮೀಕಿ ಮಹರ್ಷಿ ವಿರಚಿತ ರಾಮಾಯಣದ ಉತ್ತರ ಕಾಂಡದಲ್ಲಿ. ಶ್ರೀರಾಮನು ರಾವಣನನ್ನು ಕೊಂದು ಸೀತೆಯೊಡನೆ ಅಯೋಧ್ಯಾ ನಗರಕ್ಕೆ ಹಿಂದುರುಗುವನು. ಅಯೋಧ್ಯಾನಗರಿಯಲ್ಲಿ

---

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ – ಸಂಪಾದಕರು, ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೨

ಶ್ರೀರಾಮನು ಸೀತಾದೇವಿಯರಿಗೆ ವಿಜೃಂಭಣೆಯ ಸ್ವಾಗತ ದೊರೆತು ರಘುವಂಶವೇ ಸಂತೋಷದ ಸಾಗರದಲ್ಲಿ ಮುಳುಗಿರುತ್ತದೆ. ಇದೇ ಸಮಯದಲ್ಲಿ ಅಯೋಧ್ಯಾ ನಗರದ ಬೀದಿಯಲ್ಲಿ ವಾಸವಿದ್ದ ಅಗಸನು ತನ್ನ ಹೆಂಡತಿಯೊಡನೆ ವಿರಸದಿಂದ "ನಿನ್ನನ್ನು ಮನೆಗೆ ಸೇರಿಸಿಕೊಳ್ಳಲು ನಾನು ಶ್ರೀರಾಮನಲ್ಲ" ಎಂಬ ಮಾತಿನಿಂದಾಗಿ ಶ್ರೀರಾಮನು ಸೀತಾದೇವಿಯು ಪರಿಶುದ್ಧಳೆಂದು ತಿಳಿದಿದ್ದರೂ ಲೋಕಾಪವಾದಕ್ಕೆ ಹೆದರಿ ತುಂಬು ಗರ್ಭಿಣಿಯಾದ ಸೀತಾದೇವಿಯನ್ನು ದಟ್ಟ ಅರಣ್ಯಕ್ಕೆ ಬಿಟ್ಟು ಬರುವಂತೆ ಸುಮಿತ್ರಾ ತನುಜನನಿಗೆ ಕಟ್ಟಪ್ಪಣೆ ಮಾಡುತ್ತಾನೆ. ಆದರೆ ಸೀತಾದೇವಿಗೆ ಇದು ತಿಳಿದಿರುವುದಿಲ್ಲ. ಆಕೆ ಶ್ರೀರಾಮನು ನನ್ನಾಸೆಯಂತೆ ಋಷಿಯ ಆಶ್ರಮಕ್ಕೆ ಲಕ್ಷ್ಮಣನೊಡಗೂಡಿ ಕಳುಹಿಸುತ್ತಿರುವನು ಎಂಬ ಭ್ರಮಾಲೋಕದಲ್ಲಿರುತ್ತಾಳೆ. ಲಕ್ಷ್ಮಣನು ಒಲ್ಲದ ಮನಸ್ಸಿನಿಂದ ಇತ್ತ ಶ್ರೀರಾಮನ ಆಜ್ಞೆಯನ್ನು ಪಾಲಿಸಬೇಕಾಗುತ್ತದೆ. ಹೀಗೆ ಶ್ರೀರಾಮನು ಲೋಕಾಪವಾದದ ನಿವಾರಣೆಗಾಗಿ ರಘುವಂಶದ ಕೀರ್ತಿ ಸಂರಕ್ಷಣೆಗಾಗಿ ಹಾಗೂ ತನ್ನ ಕೀರ್ತಿಯ ಪಾಲನೆಗಾಗಿ ಸೀತಾಪರಿತ್ಯಾಗಕ್ಕೆ ನಿರ್ದೇಶನ ನೀಡಿ ಕಾರಣಕರ್ತನಾಗುತ್ತಾನೆ. ಶ್ರೀರಾಮನ ಆಜ್ಞೆಯಂತೆ ಲಕ್ಷ್ಮಣನು ಸೀತಾದೇವಿಯನ್ನು ಕಾಡಿನಲ್ಲಿ ಬಿಟ್ಟುಬರುತ್ತಾನೆ. ನಂತರ ವಾಲ್ಮೀಕಿ ಮಹರ್ಷಿಯ ಆಶ್ರಮದಲ್ಲಿ ಆಶ್ರಯ ಪಡೆದ ಸೀತೆ ಲವ-ಕುಶರೆಂಬ ಮಕ್ಕಳಿಗೆ ಜನ್ಮ ನೀಡುತ್ತಾಳೆ.

**ಬದಲಾವಣೆ:** ಕುವೆಂಪು ವಿರಚಿತ ವಾಲ್ಮೀಕಿಯ ಭಾಗ್ಯ ನಾಟಕ ಹಾಗೂ ವಾಲ್ಮೀಕಿಯ ಉತ್ತರಾಕಾಂಡದ ಮೂಲರಾಮಾಯಣದ ಸೀತಾಪರಿತ್ಯಾಗದ ಸನ್ನಿವೇಶಗಳಲ್ಲಿ ಕುವೆಂಪುರವರು ತಮ್ಮ ಅಭಿವ್ಯಕ್ತಿಗೆ ತಕ್ಕಂತೆ ಬದಲಾವಣೆ ಮಾಡಿಕೊಂಡಿದ್ದಾರೆ.

ಮೂಲ ರಾಮಾಯಣದಲ್ಲಿ ಶ್ರೀರಾಮನು ಸೀತೆಯನ್ನು ತೊರೆದದ್ದಕ್ಕೆ ಸ್ಪಷ್ಟವಾದ ಕಾರಣಗಳಿಲ್ಲ. ಅದು ಕೇವಲ ಶ್ರೀರಾಮನ ಕೀರ್ತಿಗಾಗಿ ರಘುಕುಲ ಕೀರ್ತಿ ಸಂರಕ್ಷಣೆಗಾಗಿ ಲೋಕಾಪವಾದದ ನಿವಾರಣೆಗಾಗಿ ಎಂಬ ಅಭಿಪ್ರಾಯವಿದೆ, ಆದರೂ ಇದು ಸೀತಾಪರಿತ್ಯಾಗದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಿಲ್ಲ. ವಾಲ್ಮೀಕಿ ಮಹರ್ಷಿಯ ಇದನ್ನು ಸೀತಾಪರಿತ್ಯಾಗ ಎಂದು ಕರೆದಿದ್ದಾನೆ.

ಆದರೆ ಕುವೆಂಪುರವರು ಈ ಭಾಗವನ್ನು ವಾಲ್ಮೀಕಿಯ ಭಾಗ್ಯವೆಂದು ಕರೆದಿದ್ದಾರೆ. ವಾಲ್ಮೀಕಿಗೆ ಸೀತೆಯನ್ನು ಹಾಗೂ ಮಕ್ಕಳಾದ ಲವ-ಕುಶರನ್ನು ಲಾಲಿಸಿ-ಪಾಲಿಸಿ ಬೆಳೆಸಿದ್ದರಿಂದಾಗಿ ಇದು ವಾಲ್ಮೀಕಿಗೆ ಒಲಿದ ಭಾಗ್ಯ ಎಂದು ಕರೆದಿದ್ದಾರೆ.

ಕುವೆಂಪುರವರು ವಾಲ್ಮೀಕಿಯ ಬಾಯಿಂದಲೇ ಸೀತೆಯನ್ನು ನೀನು ನನ್ನ ಮಹಾಕಾವ್ಯದ ಕಣ್ಣು ಕಥಾನಾಯಕಿ ಎಂದು ಹೇಳಿ ನಿನಗೆ ಆಶ್ರಯಿಸಿದ ನಾನೇ ಭಾಗ್ಯವಂತ ಎಂಬ ಸ್ವಹಿರಿಮೆಯನ್ನು ವಾಲ್ಮೀಕಿಯೇ ಪಡುವಂತೆ ಬದಲಾವಣೆ

ತಂದಿದ್ದಾರೆ. ಹೀಗೆ ಕಥಾ ನಾಯಕಿಯನ್ನು ರಕ್ಷಿಸುವುದು ವಾಲ್ಮೀಕಿಯ ಭಾಗ್ಯ ಎಂದಿದ್ದಾರೆ.

ಲಕ್ಷ್ಮಣನು ಶ್ರೀರಾಮನ ಆಜ್ಞೆಯನ್ನು ಸೀತಾದೇವಿಗೆ ಹೇಗೆ ಈ ಕಠೋರ ವಾಕ್ಯವನ್ನು ಹೇಳಲಿ ಎಂದು ಸಂಕಟ ಪಡುತ್ತಿರುವಾಗ ಕುವೆಂಪುರವರು, ಸೀತಾದೇವಿಯೇ ಬಾಯಿಂದಲೇ ರಾಮಾಜ್ಞೆಯನ್ನು ತರಿಸಿದ್ದಾರೆ ಇದು ಇವರ ಜಾಣ್ಮೆಯಾಗಿದೆ.

ಕುವೆಂಪುರವರು ಲಕ್ಷ್ಮಣನು ತನ್ನ ಮಾತೃ ಸ್ವರೂಪಿಣಿಯೂ, ಹಿತ ಬಯಸುವವಳೂ ಆದ ಸೀತಾದೇವಿಗೆ ಶ್ರೀರಾಮಾಜ್ಞೆಯ ಕಹಿಯನ್ನು ತಿಳಿಸುವ ಸಂದರ್ಭದಲ್ಲಿ ಬಳಸಿದ ವಿಧಾನ, ಭಾಷೆಗಳ ಕ್ರಿಯೆಯು ಸುಲಲಿತವಾಗಿದೆ.

ಇಲ್ಲಿ ಲಕ್ಷ್ಮಣನು ಹೆಜ್ಜೆ ಹೆಜ್ಜೆಗೂ ಜೀವಂತವಾಗುವ, ತನ್ನನ್ನೇ ಯಾರೆಂದು ಪರೀಕ್ಷಿಸಿಕೊಳ್ಳುವ ಲಕ್ಷ್ಮಣ ಸೂಚಿತ ದುಃಖದ ಪ್ರತೀಕವಾಗಿದ್ದಾನೆ. ತನ್ನಿಂದ ಮುಂದೆ ಸಂಭವಿಸುವ ಘಟನೆಯೊಂದಕ್ಕೆ ಕ್ರಿಯೆಯನ್ನು ಒದಗಿಸುವ ಕ್ರಿಯೆಯ ಮೂಲವಾಗಿದ್ದಾನೆ ಇವನೇ ನಾಟಕದ ಮೂಲ ಕ್ರಿಯೆಗಾರ. ಸೀತೆಯು ಈ ಕ್ರಿಯೆಯ ಅಂತ್ಯದ ಅಭಿನಯಕಾರ್ತಿಯಾಗುತ್ತಾಳೆ. ಹೀಗೆ ಲಕ್ಷ್ಮಣ ಸಿಡಿಯುವ ಶೋಕದ ಕ್ರಿಯೆಯಾಗಿ ಸೀತೆ ಅದರ ಪಾತ್ರದಾರಿಯಾಗುತ್ತಾಳೆ.[೧]

**ಬದಲಾವಣೆಯ ಪ್ರಸಂಗಗಳು:** ಕುವೆಂಪುರವರ ವಾಲ್ಮೀಕಿಯ ಭಾಗ್ಯ ನಾಟಕವು 'ಶ್ರೀರಾಮಚಂದ್ರನ ಪಿಸುಣ್ಣೆ ಕಿವಿಗೊಟ್ಟ ಕಟ್ಟಾಣತಿಯಂತೆ ಸೌಮಿತ್ರಿ ಗರ್ಭಿಣಿಯಾಗಿದ್ದ ಸೀತಾದೇವಿಯನ್ನು ಅರಣ್ಯದಲ್ಲಿ ಬಿಟ್ಟುಹೋಗುವ ಹೃದಯವಿದ್ರಾವಕವಾದ ಸನ್ನಿವೇಶದ ಚಿತ್ರಣವನ್ನು ಒಳಗೊಂಡಿದೆ. ಇದೇ ಈ ನಾಟಕದ ತಿರುಳು.

ಕುವೆಂಪುರವರು ತಮ್ಮ ಈ ನಾಟಕ ಭಾಗದಲ್ಲಿ ಸೀತೆ ಮತ್ತು ಲಕ್ಷ್ಮಣ ಇಬ್ಬರೂ ಪಡುವ ಸಂಕಟವನ್ನು ಸಮರ್ಥವಾಗಿ ಚಿತ್ರಿಸಿದ್ದಾರೆ. ವನವಾಸದ ವಿಷಯವನ್ನು ತಿಳಿಯದ ಮುಗ್ಧ ಮನಸ್ಸಿನ ಸೀತೆ, ಎಲ್ಲವನ್ನು ಬಲ್ಲ ಆದರೂ ಅದನ್ನು ಸೀತಾಮಾತೆಗೆ ಹೇಳಲು ಪಡುವ ಉಭಯ ಸಂಕಟ ಲಕ್ಷ್ಮಣನಿಗೆ ಒದಗಿದೆ.

ಸೀತೆಯೊಡನೆ ಉತ್ಸಾಹದಿಂದ ಹೆಜ್ಜೆಹಾಕದ ಲಕ್ಷ್ಮಣನಿಗೆ ಆಕೆ ಈ ರೀತಿ ಛೇಡಿಸುತ್ತಾಳೆ.

---

೧. ಕುವೆಂಪು ನಾಟಕ ವಿಹಾರ-ರಸಪ್ರತಿಪಾದನೆ, ಹೆಚ್.ಎಸ್.ರಾಮಚಂದ್ರೇಗೌಡ, ಸಹ್ಯಾದ್ರಿ ಪ್ರಕಾಶನ, ೧೯೭೭

ಓಹೋ! ಈಗಳರಿತೆಂ
ಅರಮನೆಯವಾಸಂ,
ಮೇಣೂರಿಳೆಯ ಲಲಿತ ಸಹವಾಸಂ,
ನಿನ್ನನಿಂತುಗೈದಿರ್ಪುದೆ ಸಾಜಂ.

ಲಕ್ಷ್ಮಣನ ಮನಸ್ಸಿನ ಸಂಕಟ ಅವನ ಕಾಲೆಳತದಲ್ಲಿ ಕಾಣಿಸುತ್ತಿದೆ. ಅವನಿಗೆ ಕಾಡು ಚಿರಪರಿಚಿತವಾದರೂ ಸೀತೆಯೊಡನೆ ರಾಮಾಜ್ಞೆಯನ್ನು ಹೊತ್ತು ತಂದಿದ್ದ-ರಿಂದಾಗಿ ಅವನಿಗೆ ನಡೆಯುವುದು ತ್ರಾಸದಾಯಕವಾಗುತ್ತದೆ.

ಸೀತಾದೇವಿಯು ರಾಮಾಜ್ಞೆಯನ್ನು ತಿಳಿಯುವ ಸನ್ನಿವೇಶ, ಅತ್ಯಂತ ಮನೋಜ್ಞವಾಗಿದೆ. ಸೀತಾದೇವಿಯು ಕಾಡಿನಲ್ಲಿ ದಾರಿತಪ್ಪಿದೆ, ಬಂದ ದಾರಿಯನ್ನೇ ಹಿಡಿದು ಮರುಳುವಾ ಎಂದಾಗ, ಲಕ್ಷ್ಮಣನು ಅದು ನನ್ನಿಂದ ಆಗದು, ನಾನು ಚಂಡಾಲ, ಇಲ್ಲೇ ಕೊಲೆಯಾಗುವೆ! ನಿಮ್ಮೊಡನೆ ಅಯೋಧ್ಯೆಗೆ ಮರಳಲಾರೆ, ಎನ್ನಲು ಸೀತಾದೇವಿಯು ಹಾಗಾದರೆ 'ಮತ್ತೇನಂ ಮಾಡುವೈ ಎನ್ನನಿಲ್ಲಿಯೇ ಬಿಟ್ಟು ನೀನೋರ್ವನೆ ಪೋಗು'!.

**ಲಕ್ಷ್ಮಣ :** ಹಾ! ತಾಯೆ, ಶ್ರೀರಾಮನಂತಾಡದಿರಿ!

**ಸೀತೆ :** ಏನಾಡಿದಂರಾಮಚಂದ್ರ
ಪೇಳಯ್
ಎನೊಡನೇರ್ಕಯ್ ಮುಚ್ಚುಮರೆ?

**ಲಕ್ಷ್ಮಣ :** ದೇವೀ
ನಿನಗಿನ್ನೆಗಂ ಪೇಳ್ದುದಿಲ್ಲಂ
ಅಪವಾದಮಾಪರಿಸೆ ನಿನ್ನನೊಲ್ಲದೆ
ರಘುಕುಲೋದ್ವಹಂ ಸೀವರಸಿಬಿಟ್ಟು
ಕಾಂತಾರಕೆ ಕಳುಹಿ ಬಾ ಎಂದೆನಗೆ ನೇಮಿಸಿದೊಡೆ......

ಹೀಗೆ ಲಕ್ಷ್ಮಣನು 'ಹೇಗೆ ನುಡಿಯಲಿ ಈ ಕಠೋರ ವಾಕ್ಯಮಂ' ಎಂದು ಚಿಂತಿಸುತ್ತಿದ್ದಾಗ ಒದಗಿದ ಸಂದರ್ಭ ಕವಿ ಪ್ರತಿಭೆಗೆ ಹಿಡಿದ ಕೈಗನ್ನಡಿಯಾಗಿದೆ.

ಅದೇ ರೀತಿ ಕೊನೆಯ ದೃಶ್ಯದಲ್ಲಿ ಸೀತೆಯನ್ನು ಒಲ್ಲದ ಮನಸ್ಸಿನಿಂದ ದಟ್ಟಡವಿಗೆ ಬಿಟ್ಟು ತೆರಳಿದ ನಂತರ ವಾಲ್ಮೀಕಿಯ ಪ್ರವೇಶವಾಗುತ್ತವೆ. ಸೀತೆಯನ್ನು ಕಂಡು ಸಂತೈಸಿ

ತಾಯಿ, ಮೇಲೇಳು
ನಿನಗೆಲ್ಲಂ ಬಳ್ಳಿತಹುದು
ನೀನೆನ್ನ ಮಹಾಕಾವ್ಯದ ಸವಿಗಣ್ಣಲ್ತೆ!
ಕಥಾನಾಯಕಿಯಲ್ತೆ
ವಾಲ್ಮೀಕಿಯ ಭಾಗೆಮಲ್ತೆ!

ಈ ಭಾಗವನ್ನು ಕುವೆಂಪುರವರು ಸಾರ್ಥಕವಾಗಿ ಬದಲಾಯಿಸಿ ನಾಟಕದ ಮುಖ್ಯ ಗುರಿಯನ್ನು ವಾಲ್ಮೀಕಿಯ ಬಾಯಿಯಿಂದಲೇ ತಿಳಿಸಿದ್ದಾರೆ. ಸೀತೆಯು ವಾಲ್ಮೀಕಿಯ ಆಶ್ರಮದಲ್ಲಿ ಲವ-ಕುಶರಿಗೆ ಜನ್ಮವನ್ನು ನೀಡುತ್ತಾಳೆ. ಈ ಪ್ರಸಂಗವೇ ರಾಮಾಯಣದ ರಚನೆಗೆ ಕಾರಣವಾಗಿ ವಾಲ್ಮೀಕಿಯೇ ಈ ಕಥಾನಕದ ಕರ್ತೃವಾಗಿ ರಾಮಾಯಣ ರಚನೆಯಾಗಿ ವಾಲ್ಮೀಕಿ ಭಾಗ್ಯವಾಗುತ್ತದೆ. ಇವು ಕುವೆಂಪು ತಮ್ಮ ವಾಲ್ಮೀಕಿ ಭಾಗ್ಯದಲ್ಲಿ ತಂದ ಕೆಲ ಪ್ರಸಂಗಗಳು.

**ನಾಟಕ –ಸ್ಮಶಾನ ಕುರುಕ್ಷೇತ್ರಂ**

ಮಹಾಭಾರತ ಸಂಗ್ರಾಮದ ಕೊನೆಯ ಹದಿನೆಂಟು ದಿನಗಳಲ್ಲಿ ನಡೆದ ರಣಕೋಲಾಹಲದ ಪರಿಣಾಮವೇ ಶ್ಮಶಾನ ಕುರುಕ್ಷೇತ್ರ. ಅದುವರೆಗೂ ರಣರಂಗ-ವಾಗಿದ್ದ ಕುರುಕ್ಷೇತ್ರವು ಕೋಟ್ಯಾನುಕೋಟಿ ಯೋಧರ ಶವಗಳೂ, ಅಸಂಖ್ಯಾವಾದ ಅನೆ, ಕುದುರೆ ತೇರುಗಳು ಮಂದೆಮಂದೆಯಾಗಿ, ಮುದ್ದೆಮುದ್ದೆಯಾಗಿ, ಅಸ್ತವ್ಯಸ್ತವಾಗಿ ಬಿದ್ದಿದ್ದು, ಸಾಯುವವರೂ, ಗಾಯಪಟ್ಟವರೂ, ನರಳುತ್ತಾ, ರೋದಿಸುತ್ತಾ ಕುರುಕ್ಷೇತ್ರವನ್ನು ಶ್ಮಶಾನ ಕುರುಕ್ಷೇತ್ರವನ್ನಾಗಿಸಿದೆ. ಇಡೀ ಪ್ರದೇಶವು ದುಃಖದ ಮೋರೆಯನ್ನು ಹೊತ್ತು, ಭಯಾನಿಕ ಮೃತ್ಯು ಮೌನವನ್ನು ಹೊಂದಿ ಸಾವಿರಾರು ಅಸ್ಪಷ್ಟ ಆಕೃತಿಗಳ, ಅರೆ ಮುಸುಕು ಹಾಕಿಕೊಂಡು ಸುಳಿದಾಡುವ ಮನುಷ್ಯ ಆಕೃತಿಗಳು ಕೈಯಲ್ಲಿ ಸೊಡರು ಹಿಡಿದು ಚಲಿಸುತ್ತಿವೆ. ಇವರೆಲ್ಲ ಭಾರತ ಯುದ್ಧದಲ್ಲಿ ಮಡಿದವರ ಬಂಧುಗಳು, ತಂದೆತಾಯಿಗಳು, ಅಣ್ಣತಮ್ಮಂದಿರು, ಅಕ್ಕತಂಗಿಯರು, ಸತಿಯರು, ಮಕ್ಕಳು, ಮುದುಕರು, ಕೌರವ ಪಾಂಡವ ಪಕ್ಷದವರು ಅಂದು ಸ್ಮಶಾನದಲ್ಲಿ ಭೇದವಿಲ್ಲದೆ ತಮ್ಮ ತಮ್ಮ ನೆಂಟರಿಷ್ಟರ ದೇಹವನ್ನು ಅರಸುತ್ತಿದ್ದಾರೆ.

ಶ್ಮಶಾನ ಕುರುಕ್ಷೇತ್ರಂ ನಾಟಕದ ಬಗ್ಗೆ ಸಿಪಿಕೆಯವರು ಹೇಳಿರುವಂತೆ "ಮಹಾಭಾರತದ ಅಂತಿಮ ಘಟ್ಟವನ್ನು ಕುವೆಂಪು ತಮ್ಮ ನಾಟಕದ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ವಾಸ್ತವವಾಗಿ, ವ್ಯಾಸರು ಎಲ್ಲಿಗೆ ನಿಲ್ಲಿಸಿದ್ದರೋ ಅಲ್ಲಿಂದ ಪ್ರಾರಂಭಗೊಳ್ಳುತ್ತದೆ ಕುವೆಂಪು ಅವರ ಕೃತಿ ಎನ್ನಬಹುದು. ಎಂತಲೇ ಇದು ಅತ್ಯಂತ ಸೋಪಜ್ಞವಾಗಿದ್ದು, ಋಷಿಸಹಜವಾದ ಪೂರ್ಣದೃಷ್ಟಿ, ದರ್ಶನಗಳನ್ನು ಗರ್ಭೀಕರಿಸಿ-

ಕೊಂಡಿದೆ. ಸಮಕಾಲೀನ ಪ್ರಜ್ಞೆಯನ್ನು ಧಾರಣ ಮಾಡಿಕೊಂಡು ಕಾಲದೇಶಾತೀತವಾದ ಸತ್ಯವನ್ನು ಅಭಿವ್ಯಕ್ತಗೊಳಿಸುವವನೇ ಮಹಾಕವಿ. ಕುವೆಂಪುರವರ ದರ್ಶನ ಈ ಎರಡೂ ಭೂಮಿಕೆಯಲ್ಲಿ ಅನುಭವಗಮ್ಯವಾಗುತ್ತದೆ. ಅವರು 'ಶ್ಮಶಾನ ಕುರುಕ್ಷೇತ್ರಂ' ನಾಟಕದಲ್ಲಿ ಸಾಂಪ್ರತಯುಗವನ್ನು, ಯುಗಧರ್ಮವನ್ನು ಕಂಡರಿಸಿದ್ದಾರೆ. ಮಾತ್ರವಲ್ಲದೆ ಕೆಲವು ನಿತ್ಯಸತ್ಯಗಳನ್ನು ಪ್ರತಿಮಿಸಿದ್ದಾರೆ. ಎಂತಲೇ ಈ ನಾಟಕವೊಂದು ಸಂಕೀರ್ಣವೂ ಸಾರ್ಥಕವೂ ಆದ ಸೃಷ್ಟಿಯಾಗಿದೆ. ಕುರುಕ್ಷೇತ್ರದ ಘೋರ ಧಾರುಣ ವಿನಾಶದೃಶ್ಯದ ನಡುವೆಯ ನವಸೃಷ್ಟಿಯನ್ನು ಅದು ಅನಾವರಣಗೊಳಿಸುತ್ತದೆ.[೧]

ಆ ದಿನ ಸಾಯಂಕಾಲ ಭೀಮ ದುರ್ಯೋಧನನ ಗದಾಯುದ್ಧವು ಪೂರೈಸಿದೆ. ಕೌರವೇಂದ್ರನು ತೊಡೆಯೊಡೆದು ಮುಡಿಯುಡಿದು ವೈಶಂಪಾಯನ ಸರಸಿನ ತೀರದಲ್ಲಿ ನರಳುತ್ತಾ ಇನ್ನೂ ಜೀವಂದಿಂದಿದ್ದಾನೆ. ಅದೇ ರಾತ್ರಿ ದ್ವಾಪರಯುಗ ಮುಗದಿದು ಕಲಿಯುಗ ಪ್ರಾರಂಭವಾಗುವುದು, ಹೀಗೆ ಕಲಿದೇವ ದ್ವಾಪರ ದೇವರು ಇಬ್ಬರೂ ತಮ್ಮ ಬರುವಿಕೆ, ನಿರ್ಗಮಿಸುವಿಕೆಯ ಬಗ್ಗೆ ಆತಂಕವನ್ನೂ, ಆನಂದವನ್ನೂ ಪಡುವರು.

ಇಲ್ಲಿನ ಎಲ್ಲ ಪಾತ್ರಗಳ ಮೇಲೆ ಕುವೆಂಪುತನದ ಮುದ್ರೆಯಿದೆ. ಯಾವ ಪಾತ್ರವೂ ಮೂಲಪಾತ್ರದ ಪ್ರತಿಕೃತಿಗಳಾಗಿಲ್ಲ. ಹೊರಹುಟ್ಟನ್ನು ಪಡೆದುಕೊಂಡಿವೆ. ಶ್ರೀಕೃಷ್ಣನಂತೂ ರುದ್ರಭೂಮಿಯಲ್ಲಿ ಅಸುನೀಗುತ್ತಿರುವ ಪ್ರತಿಯೊಬ್ಬರಿಗೂ ಮೋಕ್ಷ-ವನ್ನೀಡಾಡುವ ದಿವ್ಯಪುರುಷನಾಗಿ ನಿರಂತರ ಕಾಯಕದಲ್ಲಿ ತೊಡಗಿದ್ದಾನೆ. ದುರ್ಯೋಧನನನ್ನು ಕನಸಿನ ಮಾಯೆಯಿಂದ ಬಿಡಿಸಿ ಅವನಿಗೆ ಜ್ಞಾನೋದಯವನ್ನುಂಟು ಮಾಡುತ್ತಾನೆ. ತಿಳಿದೋ-ತಿಳಿಯದಂತೂ ತನ್ನ ಹೆಸರನ್ನು ಕರೆದ ಪ್ರತಿಯೊಬ್ಬರ ಬಳಿಗೂ ಅವನು ಹೋಗುತ್ತಾನೆ. ಅಲ್ಲಿ ಸಾಮಾನ್ಯ-ಸಾರ್ವಭೌಮ ಎಂಬ ಭೇದವಿಲ್ಲ.[೨]

ಶ್ಮಶಾನ ಕುರುಕ್ಷೇತ್ರದ ಮತ್ತೊಂದು ಭಾಗದಲ್ಲಿ ಗಿರ್ವಾನ ನೀಲಾಕ್ಷ, ಚಾಣೂರರೆಂಬ ಮೂರು ಜನ ಕೌರವೇಂದ್ರನ ಕಿಂಕರರು ತಮ್ಮ ಸ್ವಾಮಿಯ ಪರಾಭವವನ್ನು ಕೇಳಿ ಆತನಿರುವ ತಾಣ ಕಂಡುಹಿಡಿದು ಸೇವೆಮಾಡಲು ಆತುರರಾಗಿ ಆಗಮಿಸಿ, ಸಿಕ್ಕ ಸಿಕ್ಕ ಹೆಣಗಳನ್ನು ಎತ್ತಿಹಿಡಿದು ತಮ್ಮ ಸ್ವಾಮಿಯೇ? ಎಂದು ಪರೀಕ್ಷಿಸುತ್ತಾ, ಗುರುತಿಸುತ್ತಾ ಸಾಗಿ ಕತ್ತಲಲ್ಲಿ ಮರೆಯಾಗುವರು.

ಮೂಲವಾದ ದುಃಖ ಶ್ಮಶಾನ ಕುರುಕ್ಷೇತ್ರದ ಕ್ರಿಯೆ. ಮೂಲದಲ್ಲಿಯ ವಿಷಾದಕ್ಕೆ ಧೃತಿ ಮೂಲವಾದ ಉತ್ತರ ಸಿಕ್ಕಿದರೂ ವಿಷಾದ ತಾತ್ಕಾಲಿವಾದ್ದು ಅನಿಸುವುದಿಲ್ಲ.

---

೧. ಕುವೆಂಪು ಕೃತಿ ವಿಮರ್ಶೆ, ಸಿ.ಪಿ.ಕೆ., ಸಂ.: ಪ್ರೊ. ಅರವಿಂದ ಮಾಲಗತ್ತಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೨೦೦೬, ಪು. ೪೨೬

೨. ಕುವೆಂಪು ನಾಟಕ ವಿಹಾರ – ಪಾತ್ರಚಿತ್ರಣದಲ್ಲಿ, ಮಳಲಿ ವಸಂತಕುಮಾರ್, ಸಂ.: ದೇಜಗೌ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪು. ೪೩

ನಾಟಕದಲ್ಲಿ ಅದು ಅನಂತ ಕ್ರಿಯೆಯಾಗಿ ಮುಂದುವರೆಯುತ್ತದೆ. ಧೃತಿ ಈ ನಾಟಕದಲ್ಲಿಯೇ ಅವಸಾನವಾಗದೆ ಮುಂದುವರಿಯುತ್ತದೆ. ಅದು ನಾಟಕದ ಯಾವುದೋ ಒಂದು ಒಳಸೆಲೆಯಾಗಿ ನಿಲ್ಲುತ್ತದೆ.[೧]

ಕುರುಕ್ಷೇತ್ರದ ಭೀಕರ ಶ್ಮಶಾನತೆಯನ್ನು, ಭೀಮ-ದುರ್ಯೋಧನರ ನಡುವಿನ ಗದಾಯುದ್ಧವನ್ನು, ಕುರುಕ್ಷೇತ್ರದಲ್ಲಿ ಬಿದ್ದಿರುವ ಹೆಣಗಳ ರಾಶಿ, ಮತ್ತು ಈ ರಾಶಿಯ ನಡುವೆ ನರೆಕೂದಲನ್ನು ಹೊಂದಿರುವ ಮುದುಕಿ ಹೆಣಗಳ ನಡುವೆ ಬಾಗಿ ಬಾಗಿ ಹುಡುಕುವ ದೃಶ್ಯಗಳನ್ನು, ಮರುಳುಗಳು ನೋಡಿ ತಮ್ಮಲ್ಲೇ ಮಾತನಾಡಿಕೊಳ್ಳುತ್ತಾ ಮರೆಯಾಗುತ್ತವೆ. ಹಣ್ಣು ಹಣ್ಣು ಮುದುಕಿಯೊಬ್ಬಳು, ತನ್ನ ಮಗನನ್ನು ಹುಡುಕುತ್ತಾ ದೊಣ್ಣೆಯೂರಿಕೊಂಡು ಬರುತ್ತಾಳೆ. ಶ್ರೀಕೃಷ್ಣನನ್ನು ಸಂಧಿಸಿ ತೆರಳುವಳು, ಶ್ರೀಕೃಷ್ಣನು ರಣರಂಗದಲ್ಲಿ ಮಡಿದ ತನ್ನನ್ನು ಸ್ಮರಿಸಿದ ಸೈನಿಕರಿಗೆ ಮುಕ್ತಿ ನೀಡುವ ಕಾರ್ಯದಲ್ಲಿ ತೊಡಗಿರುತ್ತಾನೆ. ತನ್ನನ್ನು ಅರಿತೇ ಅರಿಯದಯೆ ಕೃಷ್ಣನೆಂದು ನಾಮಸ್ಮರಣೆಯನ್ನು ಮಾಡುವ ಪ್ರತಿಯೊಬ್ಬನ ಬಳಿಗೂ ತೆರಳುವ ಕಾರ್ಯದಲ್ಲಿ ನಿರತನಾಗಿದ್ದಾನೆ.

ಎಚ್ಚೆಸ್ಕೆ ಅವರು ಸಮರ್ಥವಾಗಿ ಊಹಿಸಿರುವಂತೆ, ದ್ವಾಪರನ ಪಾತ್ರ ಗತಕಾಲದ ಸಂಕೇತವಾದರೆ, ಕಲಿಭವಿಷ್ಯವನ್ನು ಪ್ರತಿನಿಧಿಸುತ್ತಾನೆ. ಭೂತ ಭವಿಷ್ಯತ್ತುಗಳ ಸಂಧಿಕಾಲವೇ ಕುರುಕ್ಷೇತ್ರದ ಆ ರಾತ್ರಿ ಸಾವುನೋವು ತುಂಬಿದ ವರ್ತಮಾನ, ಅದೂ ಅನಾದಿ ಅನಂತಗಳ ಸೆರೆಗನ್ನು ಹಿಡಿದೆಳೆಯುವ ವರ್ತಮಾನ.[೨]

ಕುರುಕ್ಷೇತ್ರದ ಮತ್ತೊಂದು ತುದಿಯಲ್ಲಿ ಸಂಜಯನೊಡಗೂಡಿ ಧೃತರಾಷ್ಟ್ರ, ಗಾಂಧಾರಿಯರು ಕೌರವೇಂದ್ರನನ್ನು ಹುಡುಕುತಿಹರು, ಹಾಗೆಯೇ ಭಾನುಮತಿ ತನ್ನ ಪತಿಯನ್ನರುಸುತ್ತಾ ಸಖಿಯೊಂದಿಗೆ ಮುಸುಕುಹಾಕಿಕೊಂಡು ಬರುವಳು.

ಇವರಂತೆಯೇ ಧರ್ಮರಾಯ ಅರ್ಜುನ, ಭೀಮಸೇನ, ದ್ರೌಪದಿ ಮೊದಲಾದವರು ಅಭಿಮನ್ಯು, ಘಟೋತ್ಕಚ ಮುಂತಾದ ಪಾಂಡವರ ಕಡೆಯ ಶವಗಳ ಶೋಧನೆಗಾಗಿ ಅರಸುತ್ತಾ ಕುರುಕ್ಷೇತ್ರಕ್ಕೆ ಬರುವರು. ಅಲ್ಲಿ ಸೈನಿಕನೊಬ್ಬನು ಆರ್ತನಾದವನ್ನು ಕೇಳಿ ಅವನಿಗೆ ನೀರನ್ನು ಕುಡಿಸುವರು. ಪಾಂಡವರ ಕೈಯಿಂದ ನೀರು ಕುಡಿದೆನೆಂದು ತಿಳಿದ ಆ ಸೈನಿಕನು, 'ಅಯ್ಯೋ! ಎಂತಹ ಅಪರಾಧವನ್ನು ಎಸಗಿದೆ. ಮನ್ನಿಸೆನ್ನನ್ ಪ್ರಭೂ, ಮನ್ನಿಸಯ್! ಮನ್ನಿಸಯ್' ಎಂದು ಸಾಯುವನು.

---

೧. ಕುವೆಂಪು ನಾಟಕ ವಿಹಾರ - ರಸಪ್ರತಿಪಾದನೆಯಲ್ಲಿ, ಹೆಚ್.ಎಸ್.ರಾಮಚಂದ್ರೇಗೌಡ, ಸಂ.: ದೇಜಗೌ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪು. ೩೭

೨. ಕುವೆಂಪು ನಾಟಕ ಸಮೀಕ್ಷೆ, ಎಚ್ಚೆಸ್ಕೆ, ಸಂ.: ಎಂ.ಸಿ.ವಸಂತಕುಮಾರ, ಪು. ೧೮೨

ವೈಶಂಪಾಯನ ಸರೋವರದ ತೀರವೂ ಕತ್ತಲೆ ಕವಿದುಕೊಂಡು ಶ್ಮಶಾನದ ಕರಾಳದ ದೃಶ್ಯವಿದೆ. ಈ ಸರೋವರದ ತೀರದಲ್ಲಿ ಕೌರವೇಂದ್ರನು ಊರುಭಂಗ, ಕಿರೀಟಭಂಗವಾಗಿ, ತೊಡೆಮುರಿದುಕೊಂಡು ನರಳುತ್ತಾ ದೇಸಿಗನಂತೆ ಬಿದ್ದಿದ್ದಾನೆ. ಕೌರವೇಂದ್ರನು ಅಶ್ವತ್ಥಾಮನನ್ನು ಕರೆದು ತನ್ನ ಸುಡುಗಾಡಿನಾಕಾಂಕ್ಷೆಯನ್ನು 'ಕರ್ಣನನ್ನು ನನ್ನೊಡನೆ ಚಿತೆಯಲ್ಲಿ ಬೇಳ್ದಪೆಯಾ?' ಎಂದು ತನ್ನ ಕೊನೆಯ ಕೋರಿಕೆಯನ್ನು ಈಡೇರಿಸುವಂತೆ ಕೋರುವನು. ತನ್ನೆಲ್ಲಾ ಸ್ಥಿತಿಗೆ ಕೃಷ್ಣನೇ ಕಾರಣನೆಂದು ಬಗೆದು ಕೋಪದಿಂದ ಕೃಷ್ಣಾ! ಕೃಷ್ಣಾ! ಕೃಷ್ಣಾ! ಎಂದು ಕೂಗುವನು. ತಕ್ಷಣ ಶ್ರೀಕೃಷ್ಣನು ಬಂದು 'ಬಂದೆನಿದೋ ರಾಜೇಂದ್ರ' ಎನ್ನುವನು. ನಿನ್ನನ್ನು ಕರೆದವರಾರು, ಭಕ್ತಿಯಿಂದ ಕೂಗಲಿಲ್ಲವೋ? ಕೋಪದಿಂದ ಕೂಗಿದೆ ಎಂದ ರಾಜೇಂದ್ರನ ಮಾತಿಗೆ ಈ ಸ್ಥಿತಿಗೆ ಕಾರಣ ನಾನಲ್ಲ ಎಂದು ಕೌರವೇಂದ್ರನು ಹಿಂದೆ ಮಾಡಿದ ಕಾರ್ಯಗಳು, ಛಲವೇ ಕಾರಣವೆಂದು ತಿಳಿಸುವನು. ನಂತರ ಶ್ರೀಕೃಷ್ಣ ದೃಷ್ಟಿಯಿಂದ ಕೌರವೇಂದ್ರನಲ್ಲಿ ಆವರಿಸಿದ್ದ ಮಾಯೆ ಅಳಿದು ಕೌರವನ ಸುವರ್ಣ ಸ್ವಪ್ನ ಜಲಬುದ್ದುದಂತೆ ಸಿಡಿಯೊಡೆಯುತ್ತದೆ. ಸ್ವಲ್ಪ ಸಮಯದ ನಂತರ ಕೌರವನು ಪುನಃ ಮಾಯೆ ಕವಿದು ನೆಲದ ಮೇಲೆ ನರಳುತ್ತಾ ಬಿದ್ದಿರುತ್ತಾನೆ. ಸಂಜಯ, ಧೃತರಾಷ್ಟ್ರ, ಗಾಂಧಾರಿ, ಭಾನುಮತಿ ಮೊದಲಾದವರು ಬಂದು ಕೌರವೆಂದ್ರನ ಮೇಲೆ ಬಿದ್ದು ಗೋಳಡುತ್ತಾರೆ.

ಕುರುಕ್ಷೇತ್ರದ ಮತ್ತೊಂದೆಡೆ ಕುಂತಿಯು ಸಹದೇವನೊಡಗೂಡಿ ತನ್ನ ಹಿರಿಯಮಗ ಕರ್ಣನ ಶವವನ್ನು ಅರಸುತ್ತಾ ಬರುತ್ತಾಳೆ. ಕರ್ಣನು ಕುಂತಿಯಮಗ, ತನ್ನ ಅಣ್ಣನೆಂದು ತಿಳಿದು ಸಹದೇವನಿಗೆ ದಿಗ್ಭ್ರಾಂತನಾಗುತ್ತಾನೆ. ಕರ್ಣನ ಶವವನ್ನು ತೋರಿಸುತ್ತಾನೆ. ಕುಂತಿ ಕರ್ಣನ ಶವದ ಮೇಲೆ ಬಿದ್ದು 'ಹೆತ್ತು ಹೊಳೆಗಿತ್ತ ನಿನ್ನನ್ ಸತ್ತ ಸುಡುಗಾಡಿನೊಳ್ ಮತ್ತೆ ಮುದ್ದಿಪಂತಾಯ್ತೆ?' ಎಂದು ಗೋಳಿಡುತ್ತಾ ರೋದಿಸುವಳು.

ಶ್ಮಶಾನ ಕುರುಕ್ಷೇತ್ರಕ್ಕೆ ಮುದುಕಿಯೊಬ್ಬಳು ತನ್ನ ಮಗ ನಾರಾಯಣನನ್ನು ಹುಡುಕುತ್ತಾ ಮಾತೆಯೊಬ್ಬಳು ತನ್ನ ಕಂದನೊಡನೆ ಪತಿಯನ್ನು ಅರಸುತ್ತಾ ಬರುವರು. ಈ ಇಬ್ಬರೂ ಸೈನಿಕರು ಪಾಂಡವರ ಮತ್ತು ಕೌರವರ ಕಡೆಯವರಾಗಿದ್ದು ಇಬ್ಬರೂ ಒಬ್ಬರನೊಬ್ಬರು ಭರ್ಜಿಗಳಿಂದ ತಿವಿದುಕೊಂಡು ಮಡಿದಿದ್ದಾರೆ. ಇದನ್ನು ಕಂಡ ಮುದುಕಿ ಮತ್ತು ಮಾತೆಯರು ಕೌರವರು ಹಾಳಾಗಲಿ, ಪಾಂಡವರು ಹಾಳಾಗಲಿ ಎಂದು ಶಾಪ ಹಾಕುತ್ತಾರೆ.

ಕುರುಕ್ಷೇತ್ರ ಸ್ಮಶಾನದ ಒಂದು ಭಾಗದಲ್ಲಿ ಪಾಂಡವ ಪಕ್ಷದವರ ಚಿತೆಯಲ್ಲಿ ಅಭಿಮನ್ಯು, ಘಟೋತ್ಕಚರೇ ಮೊದಲಾದವ ಶವಗಳು ಬಿದ್ದಿವೆ. ಭೀಮ, ಅರ್ಜುನ, ಧರ್ಮರಾಯ, ದೌಪತಿಯರು ಶೋಕವಿಹ್ವಲರಾಗಿದ್ದು, ಈ ಸಮಯದಲ್ಲಿ ಕುಂತಿಯು ಕರ್ಣನ ಶವವನ್ನು ತೆಗೆದುಕೊಂಡು ಸಹದೇವನಜೊತೆ ಬಂದು, ಪಾಂಡವರ ಚಿತೆಯಲ್ಲಿ

ಕರ್ಣನ ಶವಕ್ಕೆ ಸ್ಥಳ ನೀಡುವಂತೆ ಬೇಡುವಳು. ವಿಷಯ ತಿಳಿದ ಧರ್ಮರಾಯ, ಅರ್ಜುನ, ಭೀಮರು ವಿರೋಧಿಸುವರು ಇದೇ ಸಮಯಕ್ಕೆ ಅಶ್ವತ್ಥಾಮನು ಬಂದು ಕೌರವೇಂದ್ರನ ಕೊನೆಯ ಆಸೆಯನ್ನು ತಿಳಿಸಿ ಕರ್ಣನ ಶವವನ್ನು ತೆಗೆದುಕೊಂಡು ಹೋಗುವನು. ನಂತರ ಪಾಂಡವರಿಗೆ ಕುಂತಿಯು ಕರ್ಣನು ತನ್ನ ಮಗನೆಂಬ ವಿಷಯ ತಿಳಿಸುವಳು. ಎಲ್ಲರೂ ವಿಷಾದಿಸುವರು.

ಕೊನೆಯದಾಗಿ ಕುರುಕ್ಷೇತ್ರಕ್ಕೆ ರುದ್ರನ ಪ್ರವೇಶವಾಗಿ ತನ್ನ ಮೈಗೆ ಬೂದಿಯನ್ನು ಬಳಿದುಕೊಂಡು ಕೃಷ್ಣನ ಜೊತೆ ಸಂವಾದಿಸುತ್ತಾನೆ. ಭವಿಷ್ಯತ್ತಿನಲ್ಲಿ ಕೃಷ್ಣ ಸಾರಥ್ಯದಲ್ಲಿ ಕಲಿಯುವ ಮಹಾಕಾವ್ಯ ಪ್ರಾರಂಭವಾಗುತ್ತದೆ.

ಮರುಳಸಿದ್ದಪ್ಪನವರು ಹೇಳುವಂತೆ "ದ್ವಾಪರ ಕಲಿಯುಗದ ಸಂಧಿಕಾಲದ ಒಂದುರಾತ್ರಿಯ ಕಥೆಯನ್ನು ನಿಮಿತ್ತವಾಗಿರಿಸಿಕೊಂಡು ಎರಡೂ ಯುಗದ ಸಮೀಕ್ಷೆ ನಡೆಸುವ ನಾಟಕದ ಕಲ್ಪನೆ ಮಹಾಕಾವ್ಯದ ಅನುಭವವನ್ನು ತಂದುಕೊಡುವಂಥದು. ಕಲಿಯುಗದಲ್ಲಿ ಮಾನವನ ಬದುಕು ಕುಜ್ಜವಾದೀತೆ? ಎಂಬ ದ್ವಾಪರನ ಸಂದೇಹವನ್ನು ನಿವಾರಿಸಿ ಕಲಿಯು ಕೊಡುವ ಮುನ್ಸೂಚನೆಯ ಚಿತ್ರದಲ್ಲಿ ಕುವೆಂಪುರವರ ಪ್ರಗತಿಪರ ವೈಜ್ಞಾನಿಕ ಒಲವುಗಳನ್ನು ಗುರುತಿಸಬಹುದು. ಇಲ್ಲಿ ಧ್ವನಿತವಾಗಿರುವ ಇನ್ನೊಂದು ಮುಖ್ಯವಾದ ಅಂಶವೆಂದರೆ ಕಂಡ ತೇತ್ರಾದಿಗಳನ್ನು ದಾಟಿ ಬಂದಂತೆಲ್ಲಾ ಧರ್ಮಗ್ಲಾನಿಯಾಗುತ್ತಾ ಬಂದು ಕಲಿಯುಗದಲ್ಲಿ ಧರ್ಮ ಒಂದೇ ಕಾಲಿನಲ್ಲಿ ಕುಂಟುತ್ತಿದೆಯೆಂಬ ನಿರಾಸೆಯ ಪ್ರವೃತ್ತಿಯನ್ನು ನಿರಾಕರಿಸಿರುವುದು (ತಿಪ್ಪೇರುದ್ರಸ್ವಾಮಿ-ಯವರ ಅಭಿಪ್ರಾಯವನ್ನು ಕೆ.ಮರುಳಸಿದ್ದಪ್ಪನವರು ಇಲ್ಲಿ ಉಲ್ಲೇಖಿಸಿದ್ದಾರೆ).[೧]

**ಮೂಲಕಥೆ:** ಮಹಾಭಾರತ ಕಥಾನಕದಲ್ಲಿ ಪಾಂಡವರು ಮತ್ತು ಕೌರವರು ದಾಯಾದಿಗಳು. ಇವರಿಬ್ಬರ ನಡುವೆ ಸಾಮ್ರಾಜ್ಯಕ್ಕಾಗಿ ನಡೆದ ಯುದ್ಧವೇ ಕುರುಕ್ಷೇತ್ರ ಯುದ್ಧ. ಪಾಂಡವರು ಮತ್ತು ಕೌರವರ ನಡುವೆ ಸಂಧಾನಕರನಾಗಿ ಶ್ರೀಕೃಷ್ಣ ಬರುವನು. ಕೌರವೇಂದ್ರನಿಗೆ ಪಾಂಡವರಿಗೆ ನೆಲವನ್ನು ಕೊಡು ಎಂದಾಗ ಕೌರವೇಂದ್ರನು ಅವರು ಅದನ್ನು ಯುದ್ಧದಲ್ಲಿ ನನ್ನೊಡನೆ ಜಯಿಸಿ ಪಡೆಯಲಿ ಎಂದು ಸವಾಲು ಹಾಕುವನು. ನಂತರ ಪಾಂಡವರನ್ನು ಜೂಜಿನಲ್ಲಿ ಮೋಸದಿಂದ ಶಕುನಿಯ ಮೂಲಕ ಸೋಲಿಸುವನು. ದ್ರೌಪದಿಯನ್ನು ರಾಜಸಭೆಯ ಮಧ್ಯ ಸೀರೆಯನ್ನು ಸೆಳೆದು ಅವಮಾನ ಪಡಿಸುವನು. ಇದರಿಂದಾಗಿ ಪಾಂಡವರು ವನವಾಸ ಮತ್ತು ಅಜ್ಞಾತವಾಸವನ್ನು ಮಾಡಬೇಕಾಗಿ ಬಂತು. ಕೊನೆಗೆ ಪಾಂಡವರು ಕೌರವೇಂದ್ರನ ಬಳಿ ತಮಗೆ ಸೇರಿದ ಭೂಮಿಯನ್ನು ಪಡೆಯಲು ಅನಿವಾರ್ಯವಾಗಿ ಯುದ್ಧಕ್ಕೆ

೧. ಆಧುನಿಕ ಕನ್ನಡ ನಾಟಕ, ಅಂದತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೨, ಪು. ೧೩೭

ಮೊರೆಹೋಗಬೇಕಾಯಿತು. ಈ ಯುದ್ಧವು ಕುರುಕ್ಷೇತ್ರವೆಂಬ ಸ್ಥಳದಲ್ಲಿ ನಿರಂತರವಾಗಿ ಹದಿನೆಂಟು ದಿನಗಳವರೆಗೆ ನಡೆಯಿತು. ಈ ದಿನಗಳಲ್ಲಿ ಒಂದೊಂದು ದಿನ ಪಾಂಡವರ ಮತ್ತೊಮ್ಮೆ ಕೌರವರ ಕೈ ಮೇಲಾಯಿತು. ಅಂತಿಮವಾಗಿ ಕೊನೆಯ ದಿನ ಪಾಂಡವರಿಗೆ ಪೂರ್ಣ ಜಯ ಒಲಿಯಿತು. ಈ ಯುದ್ಧದಲ್ಲಿ ಎರಡೂ ಕಡೆಯ ಲಕ್ಷಾಂತರ ಸೈನಿಕರು, ಅಸಂಖ್ಯಾತ ಆನೆ, ಕುದುರೆ, ರಥಗಳು ಸತ್ತು ಮಂದೆ ಮಂದೆಯಾಗಿ ಬಿದ್ದು ಆ ರಣರಂಗವು ಸ್ಮಶಾನವಾಯಿತು.

**ಸ್ಮಶಾನ ಕುರುಕ್ಷೇತ್ರ ನಾಟಕದಲ್ಲಿ ಕಂಡುಬಂದ ಬದಲಾವಣೆಗಳು:** ಕುವೆಂಪು ಈ ನಾಟಕದಲ್ಲಿ ವೈವಿಧ್ಯಮಯ ಪಾತ್ರಗಳು, ಸನ್ನಿವೇಶಗಳನ್ನು ಸೃಷ್ಟಿಸಿ ಹೊಸತನವನ್ನು ಬಿಂಬಿಸಿದ್ದಾರೆ.

ನಾಟಕದ ಪ್ರಾರಂಭದ ದೃಶ್ಯಗಳಲ್ಲಿ ದ್ವಾಪರಯುಗ ಅಂತ್ಯಗೊಂಡು ಕಲಿಯುಗ ಆರಂಭವಾಗುವ ಸನ್ನಿವೇಶದಲ್ಲಿ ದ್ವಾಪರದೇವ ಮತ್ತು ಕಲಿದೇವರನ್ನು ಸೃಷ್ಟಿಸಿ ಸ್ಮಶಾನ ಕುರುಕ್ಷೇತ್ರ ಭೀಕರತೆ ಬಗ್ಗೆ ವಿವರಿಸಿದ್ದಾರೆ.

ಈ ನಾಟಕದಲ್ಲಿ ಕಂಡುಬರುವ ಮುದುಕಿ ಮತ್ತು ಮಾತೆಯರ ಪಾತ್ರಗಳಿದ್ದು ಇಬ್ಬರ ಹಿನ್ನಲೆ, ಭೇಟಿ, ಅವರ ದುಃಖ, ಸಾಂತ್ವನ ಕೊನೆಗೆ ಅವರು ಗಂಡ ಮಗನನ್ನು ಕಂಡು ಸನ್ನಿವೇಶಗಳು ಮನೋಗ್ನವಾಗಿವೆ.

ಕೌರವೇಂದ್ರನ ಸೇವಕರಾದ ನಿರ್ವಾಣ, ನೀಲಾಕ್ಷ, ಚಾಣೂರರು ಜೊತೆ ಕೌರವೇಂದ್ರನ ಸಂಬಂಧ ಅವರ ಸ್ವಾಮಿನಿಷ್ಠೆ, ಕೌರವೇಂದ್ರನ ಉದಾತ್ತ ನಡವಳಿಕೆಗಳು, ಕೌರವೇಂದ್ರನ ಕೊನೆಗಾಲದ ಸೇವೆಗಾಗಿ ಅವರು ಹುಡುಕಾಟಗಳು ದೊರೆ ಮತ್ತು ಸಾಮಾನ್ಯ ಸೈನಿಕನ ಸಂಬಂಧವನ್ನು ತಿಳಿಸುತ್ತವೆ.

ಕೌರವೇಂದ್ರನ ಅಂತ್ಯಕಾಲದ ದ್ವಾಪರನು ಅವನಿಗೆ ವಿದಾಯ ಹೇಳಿ ತಾನು ವಿದಾಯನಾಗುವ ಸಂದರ್ಭ, ಕೌರವೇಂದ್ರನ ಬಗ್ಗೆ ಅವನಿಗಿರುವ ಗೌರವ ಸ್ವಾಮಿನಿಷ್ಠೆಗಳು ನಾಟಕವನ್ನು ವಿಶೇಷವನ್ನಾಗಿಸಿವೆ.

ಅದೇ ರೀತಿ ಕುವೆಂಪುರವರು ರುದ್ರ ಮತ್ತು ಕೃಷ್ಣರ ಪಾತ್ರದ ಸಂವಾದದಲ್ಲಿ ಇಡೀ ದುರಂತದಲ್ಲಿ ವಿಧಿಯ ಆಜ್ಞೆ ಇರುವುದನ್ನು ತಿಳಿಸಿ ಕಲಿಯುಗದ ನಡೆಯನ್ನು ತಿಳಿಸಿದ್ದಾರೆ.

**ಕುವೆಂಪುರವರ ನಾಟಕ ಸ್ಮಶಾನ ಕುರುಕ್ಷೇತ್ರದಲ್ಲಿ ಬದಲಾವಣೆಯ ಪ್ರಸಂಗ;** ಕುರುಕ್ಷೇತ್ರವು ರಣರಂಗದಿಂದ ಶ್ಮಶಾನ ಕುರುಕ್ಷೇತ್ರವನ್ನಾಗಿಸಿದ್ದ ಸಮಯದಲ್ಲಿ ಆ ಶ್ಮಶಾನ ಕುರುಕ್ಷೇತ್ರದ ಭೀಕರ ದೃಶ್ಯಗಳು, ನೋವು ಆರ್ತನಾದ, ಭೀಷ್ಮ, ದ್ರೋಣ, ಕರ್ಣ, ಕೌರವೇಂದ್ರ,

ಅಭಿಮನ್ಯು ಮುಂತಾದವರ ಪರಾಕ್ರಮದ ಪರಾಕಾಷ್ಠೆಯನ್ನು ಕುವೆಂಪುರವರು ಕಲಿ ಮತ್ತು ದ್ವಾಪರ ನಡುವಿನ ಸಂವಾದದಲ್ಲೇ ಸಚಿತ್ರವನ್ನಾಗಿ ಚಿತ್ರಿಸಿದ್ದಾರೆ.

ಕಲಿ : ದ್ವಾಪರದೇವಾ!

ದ್ವಾಪರ : ಕಲಿ ಮಹಾಶಯ

ಕಲಿ : ಏನಿದಿಂತೊರ್ವನೇ ನಿಂತು ಚಿಂತಾಮಗ್ನನಾಗಿರ್ಪೆ
ಕರೆದೊಡಂ ಕೇಳಿಸದು. ಆವ ಮೆಯ್ಯಿಲಿಯೊಡನೆ
ನುಡಿಯುತಿಹೆ?

ದ್ವಾಪರ : ಕಲಿದೇವ, ದ್ವಾಪರನ್ ಕಲಿಯ ನೀ ಮಸಣದಲಿ
ಎದುರುಗೊಳ್ವಂತಾಯ್ತೆ? ಮುಂದೆ ಬಹ ಯುಗಪುರುಷನ್
ಆಗಲಿಹ ನಿನಗೆ ಈ ಸತ್ತ ಸುಡುಗಾಡಿನಲಿ

ದ್ವಾಪರ : ಈ ಬೀರರನಿಬರುಂ

ಕಲಿ : ಈ ಬೀರರನಿಬರುಂ

ದ್ವಾಪರ : ಬಾಂದೊರೆಯ ಕಂದನಹ ಭೀಷ್ಮನಂತಹ ಬ್ರಹ್ಮಚಾರಿಗಳ್

ಕಲಿ : ಭೀಷ್ಮಾನನ್ ಮೀರಿದಪರ್ಯೆತಹರ್!

ದ್ವಾಪರ : ಭೀಷ್ಮನೊಲ್ ಸೂರುಳಂ ತಪ್ಪದಿಹ ಪಾರ್ಥಿವರ್?

ಕಲಿ : ಅದಕೆರಡು ಮಡಿಯಹರ್ ಜನಿಸುವರ್

ಹೀಗೆ ಸ್ಮಶಾನ ಕುರುಕ್ಷೇತ್ರದಲ್ಲಿ ಕಂಡಬಂದ ಸೈನಿಕರ ಹೆಣಗಳು, ಅವರ ಬಂಧುಮಿತ್ರರ ರೋಧನ ತಮ್ಮವರ ಹೆಣಗಳಿಗಾಗಿ ಹುಡುಕಾಟ..... ಮುಂತಾದವುಗಳನ್ನು ಈ ಪಾತ್ರಗಳಲ್ಲಿ ಚಿತ್ರಿಸಿದ್ದಾರೆ.

ಕೌರವೇಂದ್ರನನ್ನು ಅರಸುತ್ತಾ ಗಿರ್ವಾಣ, ನೀಲಾಕ್ಷ ಚಾಣೂರರೆಂಬ ಮೂವರು ಸೇವಕರು ತಮ್ಮ ಸ್ವಾಮಿಯ ಅಂತ್ಯಕಾಲದಲ್ಲಿ ಸೇವೆಯನ್ನು ಮಾಡಲು ರಣರಂಗದಲ್ಲಿ ಬಿದ್ದಿರುವ ಹೆಣಗಳನ್ನು ಪರೀಕ್ಷಿಸುತ್ತಾ ಸಾಗುವರು.

ನೀಲಾಕ್ಷ: ನಿರ್ವಾಣ, ದೀವಿಗೆಯನಿತ್ತ ಹಿಡಿ, ಮಣಿ ಮುಕುಟ ಮಸ್ತರದ ಕಲಿಯೋರ್ವನಿಲ್ಲಿ ಪಟ್ಟಿಹನು ಆ ಕೃತಿಯೊಳೆಮ್ಮೊಡೆಯನನೆ ಹೋಲುವನು

ಚಾಣೂರ: ಎಲ್ಲಿ? ಎಲ್ಲಿ (ಮೂವರು ಓಡಿ ಬಂದು ನೋಡುತ್ತಾರೆ)

**ನಿರ್ವಾಣ:** ನೀಲಾಕ್ಷ; ನಿನಗೇನು ಹುಚ್ಚು ಹಿಡಿದಿದೆಯ? ಕಂಡ ಕಂಡ ಪಣನೆಲ್ಲಮಂ

ಎಮ್ಮೊಡೆಯನೆಂದೊದರುತಿಹೆ!

**ಚಾಣೂರ:** ಕರಡಿಯನ್ ಕಂಡಳುಕಿದಾತಂಗೆ ಕಣ್ಗಲ್ಲೆ ಕರಡಿಯಹುದಂತೆ, ಅಂತೆ ನೀಲಾಕ್ಷಂ ಗನಿಬರುಂ ಕುರುಚಕ್ರವರ್ತಿಯಂತೆ ತೋರುವರು.

**ನೀಲಾಕ್ಷ:** ಅಯ್ಯೋ, ಕೌರವ ಕುಲೇಂದ್ರನನ್ ನೋಡುವಾಸೆ ನನಗೆ ಮರುಳಮರಿದಂತಿಹುದು ಈ ಪೆಣದ ಬಣಬೆಗಳೊಳು ಕುರುಪತಿಯನೆಂತು ಹುಡುಕುವುದೋ ನಾನರಿಯೆ ಶವಗಳಂ ತುಳಿತುಳಿದು ಪೆಣದಿನಿಗಳಾಗುತಿಹೆವು.

**ಚಾಣೂರ:** ಬಾಣದ ಮೊನೆಗಳಂ ಮೆಟ್ಟಿ ಮೆಟ್ಟಿ ನನ್ನಡಿಗಳೆರಡೂ ಜಜ್ಜರಿತವಾಗಿಹವು ಇದೇನು ರಣರಂಗವೋ! ಪಾಳ್ಗೊಲೆಯ ನೆಲೆ!

ಹೀಗೆ ತಮ್ಮ ಒಡೆಯನನ್ನು ಹುಡುಕಲು ಅವರು ಪಡುವ ಶ್ರಮ, ಅಸಹಾಯಕತೆ, ನೋವು ಅನುಭವವಾಗುತ್ತದೆ. ಕೌರವೇಂದ್ರನ ಸೇವಕರು ಹೀಗೆ ಆತನಲ್ಲಿ ಸ್ವಾಮಿನಿಷ್ಠೆ ಮತ್ತು ಸ್ವಾಮಿ ಭಕ್ತಿಯನ್ನು ಉಳಿಸಿಕೊಳ್ಳಲು ಕೌರವೇಂದ್ರನು ಒಬ್ಬ ಸಾಮಾನ್ಯ ಸೈನಿಕನಲ್ಲಿ ಅವನು ತೋರಿದ ಮಾನವೀಯತೆಯು ಅವನನ್ನು ಈ ಎತ್ತರಕ್ಕೇರುವಂತೆ ಮಾಡಿತು. ಇದಕ್ಕೆ ನಿದರ್ಶನವಾಗಿ ಚಾಣೂರನು ಒಮ್ಮೆ ಅನಾರೋಗ್ಯದಿಂದ ನರಳುತ್ತಾ ಮಲಗಿರುತ್ತಾನೆ, ಅವನ ಹೆಂಡತಿ ಕಂಬನಿಗೆರೆಯುತ್ತಾಳೆ, ಆ ಹೊತ್ತಿನಲ್ಲಿ ಬಾಗಿಲನ್ನು ಯಾರೋ ತಳ್ಳಿದಂತಾಗಿ, ಯಾರು ಎಂದು ಕೇಳಲು ನಾನು ಬಂದಿಹೆನು? ಬಾಗಿಲನ್ನು ತೆರೆ, ಚಾಣೂರ ಎನ್ನಲು ಮಾರು ವೇಷದಿಂದ ಬಂದ ಕೌರವಸ್ವಾಮಿ ಕಂಡು ಆತನ ರುಜೆ ಅಡಗುತ್ತದೆ. ಇದು ದೊರೆ –ಸೈನಿಕರ ನಡುವಿನ ಸಂಬಂಧ, ಅವರ ಪರಸ್ಪರ ನಂಬಿಕೆಗಳು ಪ್ರದರ್ಶಿತಗೊಳ್ಳುತ್ತವೆ.

ಮತ್ತೊಂದೆಡೆ ಸ್ಮಶಾನ ಕುರುಕ್ಷೇತ್ರಕ್ಕೆ ಬಂದ ಮುದುಕಿ ಮತ್ತು ಮಾತೆಯರು ತಮ್ಮ ಕಂದನ ಮತ್ತು ಗಂಡನನ್ನು ಕಳೆದುಕೊಂಡು ರೋಧಿಸುವ ಕ್ರಮ ಕುವೆಂಪುರವರ ಬದಲಾವಣೆ

**ಮಾತೆ :** ಅಜ್ಜೀ ಇದೇಕಿಲ್ಲಿ ಕುಳಿತಿರುವೆ?

**ಮುದುಕಿ:** ತಾಯಿ ನನ್ನ ಮಗು ನಾರಾಯಣನನ್
ಹುಡುಕಿ ಸೋತು ಸುಣ್ಣವಾದೆ, ಅಯ್ಯೋ ಎಲ್ಲಿರ್ಪನೋ
ಏನೋ! ಪೇಳ್ವರಿಲ್ಲ, ಕೇಳ್ವರಿಲ್ಲ, ನನಗಿನ್ನೇನ್ ಗತಿ?
ಪೇಳಮಾ! ಕಡೆಗಾಲದೊಳ್ ಕಲ್ಲೆಡವಿದಂತಾಯ್ತು
(ಕೂಸನ್ನು ನೋಡಿ) ತಾಯಿ, ಈ ಮೊಗುವನ್ನೇಕೆ ಇಲ್ಲಿ
ಗೆಳತಂದಿರುವೆ? ಈ ರಾತ್ರಿಯ ರುದ್ರಭೂಮಿಗೆ?

ಮಾತೆ : ಅಜ್ಜೀ ಗುಡಿಸಲೋಳಾರುಮಿಲ್ಲ. ಇವನನ್ ಬಿಟ್ಟ
ರೆನಗಿನ್ನಾರುಂ ಗತಿಯಿಲ್ಲ, ಕದನಕೈತಂದ
ನನ್ನ ಪತಿಯನರಸಿ ಬಂದಿಹೆನ್ ಈ
ಹೆಬ್ಬಯಲಿನ ಹೆಣದ ಬಣಬೆಯೊಳು ಕಾಣಿಸದೇನುಂ!

ಮುದುಕಿ: ನಿನ್ನ ಪತಿ ಆರ ಕಡೆಯವನ್

ಮಾತೆ : ಪಾಂಡವನ ಪಕ್ಷದವನ್ ನಿನ್ನ ಪುತ್ರನ್

ಮುದುಕಿ: ಕೌರವನವನ್

ಮಾತೆ : ನಿನ್ನ ಮಗನೆನ್ನ ಪತಿಗೆ ಪಣೆಯಾಗಿದ್ದದ್ದೇನ್?

ಮುದುಕಿ: ಆರಿಗಾರು ಪಗೆ? ನಿನಗಾನ್ ಪಗೆಯೆ?

ಮಾತೆ : ಉಂಟೇ?

(ಇದೇ ಸಮಯಕ್ಕೆ ಇಬ್ಬರು ಭಟರು ಒಬ್ಬರನ್ನೊಬ್ಬರು ಭರ್ಜಿಗಳಿಂದ ತಿವಿದು ಮಡಿದಿದ್ದಾರೆ. ಒಬ್ಬನು ಮುದುಕಿಯ ಮಗನು, ಮತ್ತೊಬ್ಬನು ಮಾತೆಯ ಪತಿ, ಮುದುಕಿ ರೋಧನವನ್ನು ಆಲಿಸಿ ಓಡಿ ಬರುತ್ತಾಳೆ)

ಮುದುಕಿ: ಏನಾಯ್ತು ಮಗಳೇ?

ಮಾತೆ: ಅಯ್ಯೋ, ಅಜ್ಜ ನೋಡಿಲ್ಲಿ; ನನ್ನ ಪತಿಯನ್ ಈ ಪಾಪಿ ತಿವಿದು
ಕೊಂದಿಹನ್ ಅಯ್ಯೋ!

ಮುದುಕಿ: ಅಯ್ಯೋ, ಅಯ್ಯೋ, ನನ್ನ ಮಗನನ್ ನಿನ್ನ ಪತಿ ತಿವಿದು
ಕೊಂದಿಹನಲ್ಲಮ್ಮಾ ಅಯ್ಯೋ, ಪಾಂಡವರು ಹಾಳಾಗಲಿ

ಮಾತೆ: ಅಯ್ಯೋ, ಕೌರವರು ಹಾಳಾಗಲಿ
(ಇಬ್ಬರೂ ಬಿದ್ದು ಗೋಳಾಡುವರು)

ಇದು ಕುವೆಂಪುರವರ ಎರಡೂ ಗೊತ್ತಿಲ್ಲದ ನೆಲೆಯಲ್ಲಿ ತೋರಿಸಿದ ಏಕ ಸನ್ನಿವೇಶದ ಅಭಿವ್ಯಕ್ತತತೆಯಾಗಿದೆ. ಮೂಲ ಮಹಾಭಾರತದಲ್ಲಿರುವುದಕ್ಕಿಂತ ವ್ಯತಿರಿಕ್ತ-ವಾಗಿ ಕುವೆಂಪುರವರು ಸ್ಮಶಾನ ಕುರುಕ್ಷೇತ್ರಂ ನಾಟಕದಲ್ಲಿ ಕೌರವೇಶ್ವರನ ಪಾತ್ರವನ್ನು ವೈಭವೀಕರಿಸಿದ್ದಾರೆ. ಮೂಲದಲ್ಲಿನ ದುರ್ಯೋಧನನ್ನು ಸುಯೋಧನನ್ನಾಗಿಸಿದ್ದಾರೆ. ಈ ಪಾತ್ರಕ್ಕೆ ಉಂಟಾಗಿದ್ದ ಅನ್ಯಾಯಕ್ಕೆ ನ್ಯಾಯ ಒದಗಿಸಿದ್ದಾರೆ. ಇದು ಕೌರವೇಂದ್ರನು ಸೈನಿಕರಲ್ಲಿಟ್ಟಿದ್ದ ಸಹಾನುಭೂತಿ, ಕಾಳಜಿ, ಸೈನಿಕರಿಗಿದ್ದ ಸ್ವಾಮಿನಿಷ್ಠೆ ಸನ್ನಿವೇಶಗಳಲ್ಲಿ ವ್ಯಕ್ತವಾಗುತ್ತದೆ.

ಕೌರವೇಂದ್ರ ಹಾಗೂ ದ್ವಾಪರ ದೇವನ ಬೇಟಿಯ ಪ್ರಸಂಗದಲ್ಲಿ

ದ್ವಾಪರ : ಚಕ್ರವರ್ತಿ

ಕೌರವ : (ವಿಕಟಹಾಸ್ಯದಿಂದ) ಆರಿವರ್ 'ಚಕ್ರವರ್ತಿಯನ್' ಕರೆಯುವರ್?

ದ್ವಾಪರ : ಕುರುಕುಲ ಸಾರ್ವಭೌಮ, ನಾನಿದೋ ದ್ವಾಪರನ್!

ಕೌರವ : ಯುಗ ಪುರುಷ, ನೀನ್ಯೆ ತಂದ ಕಜ್ಜಮೇನ್

ದ್ವಾಪರ : ಎನ್ನಾಳೆ ಕೊನೆಗಂಡುದಿಂದಿದೆ ನಿನ್ನಾಣತಿಯಂ ಪಡೆದು ಬೀಳ್ಕೊಳೆ ಬಂದಿಹೆನ್

ಕೌರವ : ಅದರ್ಕೆನ್ನನ್ನೇನ್ ಕೇಳ್ವುದು? ಪಾಂಡವರಿರ್ಪರ್! ಧರ್ಮರಾಯ ನಿರ್ಪನ್! ಆ ಕೃಷ್ಣನಿರ್ದಪನ್! ಈಗಳವರಲ್ತೆ ಚಕ್ರವರ್ತಿಗಳ್?

ದ್ವಾಪರ : ನೀನಿರ್ಪನ್ನೆವರಂ ಮಿಕ್ಕವರ್ ಸಾರ್ವಭೌಮರಂತಪ್ಪರ್? ಎನಗೆ ನೀನೆ ಸಾರ್ವಭೌಮ! ಎನಗೆ ನೀನೇ ಚಕ್ರವರ್ತಿ!ನೀನೆನಗಿನ್ನುಂ ಕೌರವ ಕುಲೇಂದ್ರನ್ ಬೀಳ್ಕೊಳ್ಳುವೆನ್, ದಯಪಾಲಿಸಾಜ್ಞೆಯಂ ಆ ಗಳೆಯ ಕಲಗಿತ್ತನಧಿಕಾರಮಂ, ಪೋಗಿ ಬರಲೇನು?

ಕೌರವ : ಪೋಗಿ ಬಾ, ದ್ವಾಪರದೇವ, ಅನುಂ ಪೋಗಿ ಬರ್ಪೆನ್

ದ್ವಾಪರ : ಅಂತಕ್ಕೆ, ನಾಮಿರ್ವರಿನ್ನೊಮ್ಮೆ ಸೇರುವಂ

ಹೀಗೆ ದ್ವಾಪರ ದೇವನಿಗೆ ಕೌರವೇಂದ್ರನು ಊರುಭಂಗ ಕಿರೀಟಭಂಗವಾಗಿ ನರಳುತ್ತಾ ಬಿದ್ದಿದ್ದರೂ ಅವನೇ ನನ್ನ ಸಾರ್ವಭೌಮನೆಂದು ಬಗೆದು ಆತನ ಆಜ್ಞೆ ಪಡೆದು ವಿದಾಯ ಹೇಳುವನು, ಇಲ್ಲಿ ಕೌರವೇಂದ್ರನ ಬಗ್ಗೆ ದ್ವಾಪರನಿಗಿದ್ದ ಗುಣ,ಶೀಲ ಅಭಿಮಾನವೇ ಪ್ರಧಾನವಾಗಿದೆ.

ಕೊನೆಯದಾಗಿ, ರುದ್ರ ಮತ್ತು ಕೃಷ್ಣನ ಸಂವಾದದಲ್ಲಿ ಕುವೆಂಪು ಇಡೀ ಘಟನೆಯೇ ವಿಧಿಯಾಟ ಎಂದು ತೋರಿಸಿ ಮಿಕ್ಕವರೆಲ್ಲರೂ ಕೇವಲ ಪಾತ್ರಧಾರಿಗಳು ಸೂತ್ರದಾರಿಯಂತೆ ಪಾತ್ರದಾರಿ ಎಂಬುದನ್ನು ಈ ಸಂವಾದದಲ್ಲಿ ತಿಳಿಸುತ್ತಾರೆ.

ಕೃಷ್ಣ : ಮಹಾದೇವ

ರುದ್ರ : ವಾಸುದೇವ, ಬಂದೆಯೇನು?

ಕೃಷ್ಣ : ಬಂದೆನಯ್, ಭಗವನ್, ನೀನೇನ್, ರುದ್ರನಾಟಕದ ಕೊನೆಯ ದೃಶ್ಯಾಭಿನಯದೊಳ್ ತಲ್ಲೀನನಾಗಿರ್ಪೆಯ್ಯೆಸೆ!

ರುದ್ರ : ಅಹುದಹುದು, ಸೂತ್ರಧಾರ, (ನಸುನಕ್ಕು) ನಿನ್ನ ನಾಟಕಂ ನೇರಮಾದುದೇ?

ಕೃಷ್ಣ : ನಿನ್ನ ನೆರವೊಂದಿರೆ ನೇರ ಮಾಗದೇನ್!

ರುದ್ರ : ವಾಸುದೇವ, ಮುಂದಾವ ಕಾವ್ಯಮಂ ಕಟ್ಟುವಯ್?

ಕೃಷ್ಣ : ಕಲಿಯುಗ ಮಹಾಕಾವ್ಯಮನ್! ನಾಳೆಯೇ ಪೀಠಿಕಾ ದೃಶ್ಯಾರಂಭ ಕಲಿಯುಗ ಪ್ರಾರಂಭ

ಕಾಲನ ಚಕ್ರವು ಉರುಳಿದಂತೆ ಜೀವನ ವಿಧಾನ, ನಡೆ, ನುಡಿ, ಜನಾಂಗಗಳು ಆಗಿನ ಕಾಲಕ್ಕೆ ತಕ್ಕಂತೆ ಬದಲಾಗುವುದೆಂದು ಇದರ ಹಿಂದೆ ಕಾಲನ ಕೈವಾಡವಿದೆಯೆಂದೂ ಈ ಕಾಲನೇ ವಿಧಿಯೆಂದು ತೋರಿಸಿದ್ದಾರೆ.

ಒಟ್ಟಿನಲ್ಲಿ ಕುವೆಂಪು ನಾಟಕದಲ್ಲಿ ವೈವಿಧ್ಯಮಯವಾದ ಪಾತ್ರಗಳನ್ನು ಸೃಷ್ಟಿಸಿ ಶ್ಮಶಾನ ಕುರುಕ್ಷೇತ್ರವನ್ನು ಒಂದು ಕಿರುಮಹಾಭಾರತವನ್ನಾಗಿಸಿದ್ದಾರೆ. ಅವರು ನ್ಯಾಯಪ್ರತಿಪಾದಕರಾಗಿ ದುರ್ಯೋಧನನ ಪಾತ್ರಕ್ಕೆ ನ್ಯಾಯ ದಾನಮಾಡಿದ್ದಾರೆ. ಅನೇಕ ಸಾದೃಶ್ಯಗಳ ಮೂಲಕ ಕೌರವೇಂದ್ರನ ಪಾತ್ರವನ್ನು ವೈಭವೀಕರಿಸಿದ್ದಾರೆ.

ಮೂಲಭಾರತದಲ್ಲಿ ದುಷ್ಟ, ಕ್ರೂರಿ, ಅಹಂಕಾರಿ ಎಂದು ನಿಂದನೆಗೆ ಗುರಿಯಾಗಿದ್ದ, ಕೌರವೇಂದ್ರನಲ್ಲಿರುವ ಉದಾತ್ತಗುಣಗಳು, ಅವನ ಕಾರುಣ್ಯಭರಿತ ಜೀವನ, ಸ್ನೇಹಕ್ಕೆ, ಅವನಲ್ಲಿದ್ದ ವಿಶ್ವಾಸ ದೃಢತೆಗಳು ಮುಂತಾದವುಗಳನ್ನು ದುಷ್ಟ ನೆಲೆಯಲ್ಲೇ ಹುಡುಕಿ ದುರ್ಯೋಧನನಲ್ಲ ಅವನು ಸುಯೋಧನ ಎಂದು ನಿರೂಪಿಸಿದ್ದಾರೆ. ಇದು ಕುವೆಂಪು ಅವರಿಗೆ ಜನ್ಮಸಿದ್ಧವಾಗಿದ್ದ ವೈರುಧ್ಯಗುಣಗಳಲ್ಲಿ ಸಭ್ಯಗುಣಗಳನ್ನು ಅರಳಿಸುವ ಪ್ರತಿಭೆಯಾಗಿದೆ.

ಕುರುಕ್ಷೇತ್ರವು ಸೈನಿಕರ ಹೆಣಗಳು, ಆನೆ, ಕುದುರೆಗಳ ಸಾವಿನಿಂದ ಗಾಯ-ಗೊಂಡು ಅಂಗವಿಕಲರಾದ ಸೈನಿಕರ ರೋಧನ, ಸಾವನ್ನು ಕಂಡಬಂಧುಗಳ ಆಕ್ರಂದನ.... ಇವುಗಳಿಂದಾಗಿ ಶ್ಮಶಾನ ಕುರುಕ್ಷೇತ್ರವನ್ನಾಗಿಸಿದ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿ, ಯುದ್ದದ ನೆಲೆಯಲ್ಲಿ ಶಾಂತಿಯನ್ನು ಅರಸುವ ಶಾಂತಿಧೂತನಾಗಿ ಕುವೆಂಪು ಕಂಡುಬಂದಿದ್ದಾರೆ. ಯುದ್ಧದ ಘೋರ ಪರಿಣಾಮಗಳನ್ನು ವಿವರಿಸಿ ಎಲ್ಲಕ್ಕೂ ಯುದ್ಧವೇ ಪರಿಹಾರವಲ್ಲ ಇಲ್ಲಿ 'ಪಾಂಡವರು ಸೋಲಲಿಲ್ಲ, ಕೌರವರೂ ಸೋಲಲಿಲ್ಲ' ಎಂದು ಹೇಳಿ ಜಯದ ಸಂಭ್ರಮ, ಸೋಲಿನ ಪಶ್ಚಾತಾಪವಾಗಿ ಎಲ್ಲರಲ್ಲೂ ಕಾಡಿದೆ ಎಂಬುದನ್ನು ತಮ್ಮ ಲೇಖನಿಯ ಮೊನಚಿನಿಂದ ತೋರಿಸಿದ್ದಾರೆ.

ನಾಟಕದಲ್ಲಿ ಹಲವಾರು ವೈವಿಧ್ಯಮಯ ಪಾತ್ರ, ಸನ್ನಿವೇಶಗಳ ಸೃಷ್ಟಿಯು ಅದರಲ್ಲಿರುವ ಪಾತ್ರವೈವಿಧ್ಯತೆಯು ಪ್ರತಿಭೆ, ಪಾತ್ರ ಪ್ರತಿಭೆ ನಿರ್ವಹಿಸುವ ಕಲೆಯ ಅರಿವು ತಿಳಿಯುತ್ತದೆ.

ಕೊನೆಯದಾಗಿ ರುದ್ರ-ಕೃಷ್ಣ ಸಂವಾದದಲ್ಲಿ ಇದು ಬರೀ ಯುದ್ಧವಲ್ಲ. ವಿಧಿಯ ಲೀಲೆ ಎಂದು ತೋರಿಸಿದ್ದಾರೆ. ಮೇಲಿನೊಬ್ಬನು ಸೂತ್ರದಾರ, ಕೆಳಗಿನವರು ಪಾತ್ರಧಾರಿಗಳಂತೆ ನಟಿಸಿದ್ದಾರೆ ಎಂದು ಹೇಳಿಸುವ ಮೂಲಕ ಆಧ್ಯಾತ್ಮಕತೆಯ ಲೋಕಕ್ಕೆ ಕೊಂಡೊಯ್ದಿದ್ದಾರೆ.

**ನಾಟಕ : ಶೂದ್ರ ತಪಸ್ವಿ**

ಕುವೆಂಪು ವಿರಚಿತ ಶೂದ್ರತಪಸ್ವಿ ನಾಟಕವು ವಾಲ್ಮೀಕಿ ರಾಮಾಯಣದ ಉತ್ತರಕಾಂಡದ ಶಂಬೂಕ ಪ್ರಸಂಗವಾಗಿದೆ. ಈ ನಾಟಕದಲ್ಲಿ ಮೂರು ದೃಶ್ಯಗಳಿವೆ. ಮೊದಲನೆಯ ದೃಶ್ಯದಲ್ಲಿ ವೃಕ್ಷಭೈರವ ಹಾಗೂ ಮೃತ್ಯು ದೇವತೆಯ ನಡುವೆ ಆಶ್ರಮ ಪ್ರವೇಶಕ್ಕೆ ಸಂಬಂದಿಸಿದಂತೆ ಸಂವಾದವಿದ್ದು, ಎರಡನೆಯ ದೃಶ್ಯದಲ್ಲಿ ಪುತ್ರಶೋಕ ಹಾಗೂ ಅದಕ್ಕೆ ಕಾರಣರಾದವರನ್ನು ಶ್ರೀರಾಮ ಶಿಕ್ಷಿಸಲು ಹೊರಟ ಚಿತ್ರಣವಿದೆ. ಮೂರನೆಯ ದೃಶ್ಯದಲ್ಲಿ ಶ್ರೀರಾಮನು ಅಪರಾಧಿಗೆ ಶಿಕ್ಷೆ ನೀಡುವ ಸನ್ನಿವೇಶವಿದೆ. ಶಂಬೂಕ ಪ್ರಸಂಗದ ವಸ್ತು ಕುವೆಂಪುರವರ ಶೂದ್ರತಪಸ್ವಿ ನಾಟಕವಾಗಿ ರೂಪಾಂತರ ಗೊಳ್ಳುವಾಗ ಕುವೆಂಪುರವರು ಪುರಾಣದ ವಸ್ತು ಮತ್ತು ಪಾತ್ರಗಳಲ್ಲಿಯೇ ವೈಚಾರಿಕ ನೆಲೆಯನ್ನು ಅಡಿಪಾಯವಾಗಿ ಬಳಸಿದ್ದಾರೆ. ಇಲ್ಲಿ ಕುವೆಂಪುರವರ ಸಾಮಾಜಿಕ ದೃಷ್ಟಿಕೋನವನ್ನು ಕಾಣಬಹುದು.

ಶಂಬೂಕ ಮಹರ್ಷಿಯ ಆಶ್ರಯವನ್ನು ವೃಕ್ಷ ಭೈರವನು ಕಾವಲುಗಾರನಾಗಿ ಕಾಯುತ್ತಿದ್ದು ಈ ಪವಿತ್ರ ತಪೋಭೂಮಿಯನ್ನು ಪ್ರವೇಶಿಸಲು ಮೃತ್ಯು ದೇವತೆಯು ಬಂದಾಗ ವೃಕ್ಷ ಭೈರವನು ತಡೆಯುತ್ತಾನೆ. ಮೃತ್ಯುವು ತಾನು ಮಹರ್ಷಿಯ ಗೌರವಕ್ಕಾಗಿ ಬಂದಿರುವೆನೆಂದೂ, ಋಷಿಯನ್ನು ಅವಜ್ಞೆಗೈದ ಪಾರ್ವನೊಬ್ಬನನ್ನು ಶಿಕ್ಷಿಸಲು ಬಂದಿರುವೆನೆಂದೂ ತಿಳಿಸುತ್ತದೆ. ವೃಕ್ಷಭೈರವನಿಗೆ ಆಶ್ಚರ್ಯ ಕುತೂಹಲಗಳು ಉಂಟಾಗುತ್ತದೆ. ಇಲ್ಲಿ ಶಂಬೂಕನು ಶೂದ್ರನಾಗಿದ್ದೂ ತಪಸ್ಸು ಮಾಡುತ್ತಿರುವುದು ಅಧರ್ಮವಾಗಿದೆ ಎಂಬುದೇ ನಾಟಕದ ಕೇಂದ್ರಬಿಂದುವಾಗಿದೆ. ಹೀಗೆ ದೇವರನ್ನು ಪೂಜಿಸಲು ಹೂಗಳನ್ನು ಕೊಯ್ಯಲು ಶಂಬೂಕಾಶ್ರಮವನ್ನು ಪಾರ್ವನು ತನ್ನ ಮಗನೊಂದಿಗೆ ಪ್ರವೇಶಿಸಿ, ಮಹರ್ಷಿಯನ್ನು ಅವಜ್ಞೆಗೈದಿದ್ದರಿಂದಾಗಿ ಮೃತ್ಯುದೇವತೆಯು ಮುನಿದು ಪಾರ್ವನ ಮಗನ ಪ್ರಾಣಹರಣವಾಗುತ್ತದೆ. ಪಾರ್ವನ ಮಗನ ಶವವು ಹುತ್ತದ ಬಳಿ ಬಿದ್ದಿರುತ್ತದೆ. ಬ್ರಾಹ್ಮಣರು ರೋಧಿಸುತ್ತಾ ಶ್ರೀರಾಮನಡೆಗೆ ಸಾಗುತ್ತಾನೆ. ತನ್ನ ಮಗನ ಅನಿರೀಕ್ಷಿತ ಸಾವಿನಿಂದಾಗಿ ವಿಚಲಿತನಾದ ಪಾರ್ವ ಇದು ಸಹಜ ಸಾವಲ್ಲ ಇದರ ಹಿಂದೆ ಯಾವುದೋ ಒಂದು ದುಷ್ಕೃತ್ಯದ ಕೈವಾಡವಿದೆ ಎಂಬುದು ಅವನ ನಿಲುವು. ತಾನು ಯಾವುದೇ ತಪ್ಪನ್ನು ಎಸಗದಿದ್ದರೂ ಮತ್ತೇಕೆ ನನ್ನ ಮಗನಿಗೆ ಈ

ದುರ್ಗತಿ ಎಂಬುದು ಅವನ ಪ್ರಶ್ನೆ ಪಾರ್ವ ಆಲೋಚಿಸಿದಾಗ ಹೊಳೆವ ಉತ್ತರ ಹೀಗಿದೆ.

"ಸಾಲದೇನಾ ಶೂದ್ರನ ತಪಕೆ ಮುನಿದ ಧರ್ಮಶಾಪಂ" ಎಂದು ಶೂದ್ರತಪಸ್ಸು ಮಾಡಿದ್ದರಿಂದ ಧರ್ಮದೇವತೆ ಮುನಿದು ತನ್ನ ಮಗನ ಪ್ರಾಣಹರಣವಾಗಿದೆ ಎಂಬುದು ಪಾರ್ವನ ಅಭಿಮತ. ಆದರೆ ತಾನು ಅವಜ್ಞೆಗೈದಿದ್ದರಿಂದಾಗಿ ತನ್ನ ಮಗನಿಗೆ ಮರಣ ಸಂಭವಿಸಿದೆಂದು ಅರಿಯದೆ ಮೂಢನಾಗಿದ್ದಾನೆ. ಶ್ರೀರಾಮಚಂದ್ರನು ತನ್ನ ಮಗನನ್ನು ರಕ್ಷಿಸಿ ಅಪರಾಧಿಯಾದವರನ್ನು ಶಿಕ್ಷಿಸಬೇಕೆಂದು ಅವನ ಮೊರೆ, ಪಾರ್ವನ ರೋಧನವನ್ನು ಕೇಳಿದ ಶ್ರೀರಾಮ ಇದಕ್ಕೆ ಕಾರಣವೇನು? ನೀವೇನಾದರೂ ತಪ್ಪು ಮಾಡಿದಿರೇ? ಎಂದು ಕೇಳಲು ಪಾರ್ವನು ಬ್ರಾಹ್ಮಣನಾದ ನಾನು ತಪ್ಪು ಮಾಡಲು ಸಾಧ್ಯವೇ ಇಲ್ಲ ಎನ್ನುತ್ತಾನೆ. ಪಾರ್ವನ ಈ ಮಾತು ವರ್ಣದ ಬಗೆಗಿನ ಅವನ ಆತ್ಮ ವಿಶ್ವಾಸದ ಮಾತುಗಳಾದರೂ ಮುಂದೆ ಅದು ವ್ಯಂಗ್ಯದ ಲೇಪನವನ್ನು ಪಡೆದುಕೊಂಡಿದೆ ಆಗ ಶ್ರೀರಾಮ ನಿಮ್ಮಂಥಹವರು ತನ್ನ ರಾಜ್ಯದಲ್ಲಿರುವುದು ಭಾಗ್ಯವೇ ಸರಿ ಎಂದು ನಿಮ್ಮ ಮಗನ ಸಾವಿಗೆ ಮತ್ತೇನಾದರೂ ಬೇರೆ ಕಾರಣವಿದೆಯೇ ಎಂದು ಕೇಳಿದಾಗ ಪಾರ್ವ ಶಂಬೂಕನ ಪ್ರಸ್ತಾಪ ಮಾಡುತ್ತಾನೆ. ಶಂಬೂಕನು ಶೂದ್ರನಾಗಿದ್ದು, ತಪಸ್ಸನ್ನು ಮಾಡಿದ್ದರಿಂದ ಧರ್ಮ ದೇವತೆಯು ಮುನಿದು ತನ್ನ ಮಗನ ಅಕಾಲ ಮರಣವಾಗಿದ್ದು. ಇಂತಹ ಶೂದ್ರನನ್ನು ಸಂಹರಿಸಿ ಮಗನಿಗೆ ಒದಗಿರುವ ಅಕಾಲ ಮರಣವನ್ನು ನಿವಾರಿಸ ಬೇಕೆಂಬುದನ್ನು ಶ್ರೀರಾಮನಲ್ಲಿ ನಿವೇದಿಸಿಕೊಳ್ಳುವನು.

ಪಾರ್ವನು ಶಂಬೂಕ ಮಹರ್ಷಿಯನ್ನು ಶಿಕ್ಷಿಸಲು ಶ್ರೀರಾಮನನ್ನು ಆಶ್ರಮಕ್ಕೆ ಕರೆತರುತ್ತಾನೆ. ಶ್ರೀರಾಮನು ಮಹರ್ಷಿಯ ಆಶ್ರಮದ ಸುಂದರ ಪರಿಸರ, ಪ್ರಶಾಂತತೆಗೆ ಮನಸೋತು 'ಅನುಭವಮೆಪೇಳ್ದುದು ಇದು ಋಷಿಯ ಬೀಡೆಂದು ತಪೋಮಹಿಮೆಗೆಣೆಯುಂಟೆ?' ಎಂದು ಹೇಳುತ್ತಾ ಆ ಸುಂದರ ಪ್ರಕೃತಿಯ ಸೌಂದರ್ಯವನ್ನು ಆಸ್ವಾದಿಸುವನು. ನಂತರ ಪಾರ್ವನು ಶಂಬೂಕ ಮಹರ್ಷಿಯನ್ನು ತೋರಿಸುವನು. ಶ್ರೀರಾಮನು ಶಂಬೂಕ ಮಹರ್ಷಿಗೆ ಕೈ ಮುಗಿಯುವನು ಬ್ರಾಹ್ಮಣನಿಗೆ ಇದರಿಂದ ಆಶ್ಚರ್ಯ ಉಂಟಾಗುತ್ತದೆ.

ನಂತರ ಶ್ರೀರಾಮನು ಪಾರ್ವನನ್ನು ಕುರಿತು ತನ್ನಲ್ಲಿರುವ ಸಂಶಯ ನಿವಾರಣೆಗಾಗಿ ಕೆಲ ಸಂದೇಹ ನಿವಾರಕ ಪ್ರಶ್ನೆಗಳನ್ನು ಕೇಳುವನು. ಇಲ್ಲಿ ಪ್ರಶ್ನೆಯನ್ನು ಬ್ರಾಹ್ಮಣನಿಗೆ ವಿವೇಕ ಬರಲೆಂದು, ಅವನ ಮೌಢ್ಯಕ್ಕೆ ಬೆಳಕನ್ನು ನೀಡಲೆಂದು ಕೇಳುವೆನು. ತಪಂ ಪೂಜ್ಯಕರ್ಮಮಲ್ತೆ ಅಂತೆವೊಲ್ ಈ ತಪಸ್ವಿಯ ಕೊಲ್ವುದುಂ ಪಾಪ ಮಾಗದೆ ತಪಕ್ಕೆಣೆಯುಂಟೆ ಪೂಜ್ಯಂಹನನಂ ಪಾಪಕರ ಮಲ್ತೆ ಎನ್ನುವ ತನ್ನ ತರ್ಕವನ್ನು ಬ್ರಾಹ್ಮಣನ ಮುಂದಿಡುತ್ತಾನೆ. ಆಗ ಪಾರ್ವನು

ತರ್ಕಕ್ಕೆ ಮಿಗಿಲ್ ಶ್ರುತಿವಾಕ್ಯಮೈಸೆ
ತಪಕ್ಕನಧಿಕಾರಿ ಶೂದ್ರನ್
ಎಂಬುದು ಶಾಸ್ತ್ರಪ್ರಸಿದ್ಧಂ

ಎಂದು ಶಾಸ್ತ್ರವನ್ನೇ ಆಧಾರವಾಗಿಸಿಕೊಂಡು ಹೇಳಿ 'ನಾಯಪಾಲ್ಗೆಣೆ ಶೂದ್ರನ ತಪಂ'! ಎಂದು ತನ್ನ ನೀಚವಾದವನ್ನು ಮಾಡುತ್ತಾನೆ. ಶ್ರೀರಾಮನು ಈ ವರ್ಣ ಗರ್ವಾಂಧನಿಗೆ, ಶಾಸ್ತ್ರ ಮೂರ್ಖನಿಗೆ ಬುದ್ಧಿಕಲಿಸುವೆನು ಎಂದು ನಿರ್ಣಯಿಸುವನು. ಶ್ರೀರಾಮನು ಬಾಣ ಪ್ರಯೋಗಕ್ಕೆ ಪಾರ್ವನ ಒಪ್ಪಿಗೆಯನ್ನು ಕೇಳಲಿ "ಅಪ್ಪುದಯ್ ಧನುರ್ಧರ ಶಿಕ್ಷೆಗರ್ಹನೀ ಶೂದ್ರತಪಸ್ವಿ' ಎಂದು ಹೇಳಿ ಈ ಶೂದ್ರನ ತಪಸ್ಸು ಶಕ್ತಿದಾಯಕವಾಗಿದ್ದು ಹೀಗಾಗಿ ಇವನ ಕೊಲೆಗೆ ಸಾಮಾನ್ಯ ಬಾಣ ಪ್ರಯೋಗ ಸಾಲದು, ಅಂದು ರಾವಣನ ದಶಶಿರಗಳನ್ನು ಉರುಳಿಸಿದ ಬ್ರಹ್ಮಾಸ್ತ್ರ ತೊಡುವಂತೆ ಶ್ರೀರಾಮನಿಗೆ ಹೇಳುವನು.



ಶ್ರೀರಾಮನು ಬ್ರಹ್ಮಾಸ್ತ್ರವನ್ನು ತೊಟ್ಟು "ಅರಸಿ ಕೊಲ್ ಅರಗುಲಿಯನ್"! ಎಂದು ಆಘೋಷಿಸಿ ಎಳೆದು ಬಿಡುತ್ತಾನೆ. ಬ್ರಹ್ಮಾಸ್ತ್ರವು ಶಂಬೂಕ ಮುನಿಯ ಬಳಿ ಬಂದು ತನ್ನ ಉಗ್ರತೆಯನ್ನುಳಿದು ನಮಸ್ಕರಿಸಿ ಬಲಗೊಂಡು ಹೊರಡುತ್ತದೆ. ಇವನ್ನು ಕಂಡ ಪಾರ್ವನಿಗೆ ಆಶ್ಚರ್ಯ ಉಂಟಾಗುತ್ತದೆ. ಶ್ರೀರಾಮನು ಇದೇನ್, ಆಚಾರ್ಯ ಎನ್ನಲು ಪಾರ್ವನು ಇದು ಶೂದ್ರನ ತಪಃಪ್ರಭಾವ ನೀನಚ್ಚ ಬ್ರಹ್ಮಾಸ್ತ್ರಮುಂ ಆಯ್ತು ನಿಷ್ಫಲಂ? ಎನ್ನಲು ಶ್ರೀರಾಮನು ಅದು ಈಗಲೇ ಸಫಲವಾಗುವುದು ಋಷಿವರ್ಯರಿಗೆ ಮರ್ಯಾದೆಯನ್ನು ಸಲ್ಲಿಸಿ ತನ್ನ ಹಗೆಯನ್ನು ಧ್ವಂಸಗೆಯ್ಯಲು ಬರುವುದು ಎನ್ನಲು ಪಾರ್ವನು ಅರನ್, ಅದರ್ಮಿಯನ್ ಆ ಶೂದ್ರವನೆ? ಎನ್ನಲು ಅಲ್ತಲ್ತು, ಬ್ರಾಹ್ಮಣ-ವರೇಣ್ಯನನ್! ಪೂಜ್ಯರನ್ನು ಅವಜ್ಞೆಗೈದ ಶಾಸ್ತ್ರ ಸಂಬ್ರಾಂತನೂ, ದುರ್ವಿನೀತನೂ ಆದ ನಿನ್ನನ್ನು ದ್ವಿಜೋತ್ತಮ ಎನ್ನಲು ಪಾರ್ವನು ಶ್ರೀರಾಮನ ಕಾಲಿಗೆ ಬಿದ್ದು, ರಕ್ಷಿಸು, ಅನಾಥರಕ್ಷಕಂ, ದೀನಬಂಧೂ! ಎಂದು ಬೇಡುವನು, ಅದಕ್ಕೆ ನೀನು ಅವಜ್ಞೆಗೈದು ನನ್ನನ್ನಲ್ತು ಎನ್ನಲು ಶ್ರೀರಾಮನನ್ನು ನೀನೇ ದಾರಿ ತೋರು ಎನ್ನುವನು. ಶ್ರೀರಾಮನು ಶಂಬೂಕ ಮಹರ್ಷಿಗೆ ನಮಸ್ಕರಿಸಿದರೆ ತಂದೆಯು ಬದುಕುವನು? ಕಂದನು ಬಾಳುವನು, ಎನ್ನಲು ಪಾರ್ವನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಶ್ರೀರಾಮನಲ್ಲಿ ಕ್ಷಮೆಕೋರಿ ತನ್ನ ಶಾಸ್ತ್ರ, ವರ್ಣ, ಗರ್ವವು ಇಳಿದು ಜ್ಞಾನೋದಯವಾಗಿ ಬ್ರಾಹಣನು ಶಂಬೂಕ ಮಹರ್ಷಿಗೆ ಸಾಷ್ಟಾಂಗ ಪ್ರಣಾಮ ಮಾಡುತ್ತಾನೆ. ವನವೆಲ್ಲಾ ಸಂಭ್ರಮವಾಗಿ, ಹೂಮಳೆಗರೆದು ದೇವದುಂದುಬಿ ಮೊಳಗಿ ಮೃತ್ಯುಛಾಯೆ ಬೇಗನೆ ಓಡಿ ಕಣ್ಮರೆಯಾಗಿ ಬ್ರಾಹ್ಮಣ ಕುಮಾರನಿಗೆ ಜೀವ ಬಂದು ತನ್ನ ತಂದೆಯ ಬಳಿ ಓಡಿಬರುತ್ತಾನೆ. ತಂದೆ ಮಕ್ಕಳಿಬ್ಬರೂ ಒಡಗೂಡಿ ಶ್ರೀರಾಮನಿಗೆ ಕೈಮುಗಿಯುವರು.

ನಂತರ ಶ್ರೀರಾಮಚಂದ್ರನು ಶಂಬೂಕ ಮಹರ್ಷಿಯನ್ನು, ಬ್ರಾಹ್ಮಣಕುಮಾರನಿಗೆ ತೋರಿಸುವನು. ಬ್ರಾಹ್ಮಣ ಕುಮಾರನನ್ನು ಕುರಿತು-

ನಮಸ್ಕರಿಸಾ, ಮಹಾತಪಸ್ವಿಗೆ, ದ್ವಿಜಕುಮಾರ
ಋಷಿಕೃಪೆಯಿಂ ನೀನೀಗಳ್ ದಿಟದಿಂ ದ್ವಿಜನ್
ತಪಂ ತಾನಿರ್ಪೆಡೆಯೊಳೆ ದೂರಕ!

ಶ್ರೀರಾಮನ ಆಜ್ಞೆಯಂತೆ ಬ್ರಾಹ್ಮಣಕುಮಾರ ಮತ್ತು ಪಾರ್ವರಿಬ್ಬರೂ ಶಂಬೂಕ ಮಹರ್ಷಿಗೆ ನಮಸ್ಕರಿಸುವರು. ಶಂಬೂಕ ಮಹರ್ಷಿಯು ಇವರಿಗೆ ಆಶೀರ್ವಾದಿಸುತ್ತಾನೆ. ಬ್ರಾಹ್ಮಣನಿಗೆ ಜ್ಞಾನೋದಯವಾಗುವುದರೊಂದಿಗೆ ನಾಟಕ ಪರಿಸಮಾಪ್ತಿಯಾಗುತ್ತದೆ.

ಶೂದ್ರತಪಸ್ವಿ ನಾಟಕದ ಬಗ್ಗೆ ನರಹಳ್ಳಿ ಬಾಲಸುಬ್ರಹ್ಮಣ್ಯರವರು ತಮ್ಮ ಕುವೆಂಪು ನಾಟಕಗಳ ಅಧ್ಯಯನದಲ್ಲಿ ಹೇಳುತ್ತಾ "ಶೂದ್ರತಪಸ್ವಿ ವರ್ಣಬೇಧ ನೀತಿಯನ್ನು ವಿರೋಧಿಸುವ, ಶ್ರೇಣೀಕರಣ ಸಮಾಜದ ವ್ಯವಸ್ಥೆಯ ಮೌಲ್ಯಗಳನ್ನು ತಿರಸ್ಕರಿಸಿ ಹೊಸ ಮೌಲ್ಯಗಳನ್ನು ಹುಟ್ಟುಹಾಕುವ ಆಶಯವಿಟ್ಟುಕೊಂಡಿದ್ದರೂ ಇಡೀ ನಾಟಕದ ವಿನ್ಯಾಸ ಒಂದು ರೀತಿ ಸಂಪ್ರದಾಯಬದ್ಧಂಗೆ ಶಾಸ್ತ್ರ ಸಂ ಮೂಢಂಗೆ, ಜಾತಿಗರ್ವಾಂಧಂಗೆ' ಬುದ್ಧಿಕಲಿಸುವುದೇ ಮುಖ್ಯವೆಂದು ರೂಪಿತವಾಗಿದೆ. ಹೀಗಾಗಿಯೇ ನಾಟಕದಲ್ಲಿ ಬ್ರಾಹ್ಮಣ ಖಳನಾಯಕನಂತೆ ರಾಮ ನಾಯಕನಂತೆ ಚಿತ್ರಿತರಾಗಿದ್ದಾರೆ. ಶಂಬೂಕ ಪ್ರಸಂಗ ಶ್ರೀರಾಮ ಬ್ರಾಹ್ಮಣನಿಗೆ ಪಾಠಕಲಿಸಲು ಬಳಸಿಕೊಂಡಂತಾಗಿದೆ. ಇಡೀ ನಾಟಕದಲ್ಲಿ ಶಂಬೂಕನ ವ್ಯಕ್ತಿತ್ವ ನೇರವಾಗಿ ನಮಗೆ ಪರಿಚಯವಾಗುವುದೇ ಇಲ್ಲ. ನಾಟಕ ಶಂಬೂಕನ ಗೆಲುವಿಗಿಂತ ಶ್ರೀರಾಮಚಂದ್ರನ ಗೆಲುವನ್ನು ಚಿತ್ರಿಸುವಂತೆ ತೋರುತ್ತದೆ. ವಸಾಹತುಶಾಯಿ ಸಂಸ್ಕೃತಿಯಲ್ಲಿ ಎದುರಾಗುವ ಬಹುಮುಖ್ಯ ಸಮಸ್ಯೆಯಿದು. ಹಾಗೆ ನೋಡಿದರೆ ಶ್ರೀರಾಮ ಪ್ರಧಾನ ಸಂಸ್ಕೃತಿಯ ವಕ್ತಾರ' ಎಂದಿದ್ದಾರೆ.

**ಮೂಲಕಥೆ:** ಶೂದ್ರತಪಸ್ವಿ ನಾಟಕದ ವಸ್ತು ವಾಲ್ಮೀಕಿ ರಾಮಾಯಣದ ಉತ್ತರಕಾಂಡದ ಶಂಬೂಕ ಪ್ರಸಂಗವಾಗಿದೆ. ಸೀತಾಪರಿತ್ಯಾಗದ ನಂತರ ಒಂದು ದಿನ ವೃದ್ಧ ಬ್ರಾಹ್ಮಣನೊಬ್ಬ ಮೃತ ಬಾಲಕನನ್ನು ಹೊತ್ತು ತಂದು ಶ್ರೀರಾಮನ ಅರಮನೆಯ ಮುಂದೆ ವಿಧವಿಧವಾಗಿ ರೋಧಿಸಿ ತನ್ನ ಮಗನ ಅಕಾಲ ಮರಣಕ್ಕೆ ದೊರೆಯ ದೋಷವೇ ಕಾರಣವೆಂದು ದೂರುತ್ತಾನೆ. ಶ್ರೀರಾಮನು ಮಂತ್ರಿಸಭೆಯನ್ನು ಕರೆದು ಬ್ರಾಹ್ಮಣನು ಮಾಡಿದ ದೂರಿನ ಬಗ್ಗೆ ವಿಚಾರಿಸುತ್ತಾನೆ. ಆಗ ನಾರದ ದೀರ್ಘ ಉಪನ್ಯಾಸ ಮಾಡಿ ಶೂದ್ರನೊಬ್ಬನು ತಪಸ್ಸು ಮಾಡುತ್ತಿರುವುದರಿಂದಲೇ ಬ್ರಾಹ್ಮಣನ ಮಗನಿಗೆ ಅಕಾಲ ಮರಣವಾಗಿದೆ ಎಂದು ಹೇಳುತ್ತಾನೆ.

ಅದರಂತೆ ಶ್ರೀರಾಮನು ತಪಸ್ಸು ಮಾಡುತ್ತಿರುವ ಶೂದ್ರನನ್ನು ಹುಡುಕಿಕೊಂಡು ಹೋಗುತ್ತಾನೆ. ಎಲ್ಲ ಕಡೆ ಹುಡುಕಿ ದಕ್ಷಿಣ ದಿಕ್ಕಿಗೆ ಹೋದಾಗ ಅಲ್ಲಿ ಶಂಬೂಕನೆಂಬ ತಪಸ್ವಿಯನ್ನು ಬೇಟಿಯಾಗಿ 'ಆತ ಯಾವ ವರ್ಣಕ್ಕೆ ಸೇರಿದವನೆಂದು ಕೇಳುತ್ತಾನೆ. ಶಂಬೂಕ ತಾನು ಶೂದ್ರ ಎಂದು ಹೇಳುತ್ತಿರುವಾಗಲೇ ಆತನ ಮಾತು ಮುಗಿಯುವಷ್ಟರಲ್ಲೇ ಶ್ರೀರಾಮನ ಖಡ್ಗ ಆತನ ತಲೆಯನ್ನು ಕಡಿದು ಬೀಳಿಸುತ್ತದೆ. ಇಂದ್ರಾದಿ ದೇವತೆಯರು ಸಾಧು! ಸಾಧು! ಎಂದು ಶ್ರೀರಾಮನ ಕಾರ್ಯವನ್ನು ಹೊಗಳಿ ಹೂಮಳೆಗರೆಯುತ್ತಾರೆ. ನಿನ್ನ ಕೆಲಸಕ್ಕೆ ಮೆಚ್ಚಿದೆ. ವರವನ್ನು ಕೇಳು ಎಂದ ಇಂದ್ರನಿಗೆ ಶ್ರೀರಾಮನು ಬ್ರಾಹ್ಮಣ ಕುಮಾರನನ್ನು ಬದುಕಿಸಿಕೊಡಬೇಕೆಂದು ಹೇಳುತ್ತಾನೆ. ಶೂದ್ರನ ಅಂತ್ಯದೊಂದಿಗೆ ಬ್ರಾಹ್ಮಣ ಕುಮಾರನು ಬದುಕುತ್ತಾನೆ.

**ಬದಲಾವಣೆಗಳು :** ಕುವೆಂಪುರವರು ತಮ್ಮ ಶೂದ್ರ ತಪಸ್ವಿ ನಾಟಕದಲ್ಲಿ ಹಲವಾರು ಬದಲಾವಣೆಗಳನ್ನು ತಂದಿದ್ದಾರೆ. ಮೂಲ ರಾಮಾಯಣಕ್ಕೆ ಹೋಲಿಸಿದರೆ ಹೊಸದಾಗಿ ಪಾತ್ರಗಳು, ಸಂವಾದಗಳು ಇದ್ದು ಇಂದಿನ ಸಮಾಜ ಆದರ್ಶ ಪ್ರಾಯವಾದ ಮೌಲ್ಯಗಳನ್ನು ಬಿಂಬಿಸುವ ದೃಷ್ಟಿಯಿಂದ ಈ ರೀತಿಯ ಬದಲಾವಣೆಗಳನ್ನು ಮಾಡಿದ್ದಾರೆ.

ಕುವೆಂಪುರವರ ಶೂದ್ರತಪಸ್ವಿ ನಾಟಕದ ಮೊದಲನೆಯ ದೃಶ್ಯದಲ್ಲಿ ವೃಕ್ಷಭೈರವ ಮತ್ತು ಮೃತ್ಯುದೇವತೆಯ ಹೊಸದಾದ ಪಾತ್ರಗಳನ್ನು ಸೃಷ್ಟಿಸಿದ್ದು ಇವು ಮೂಲ ರಾಮಾಯಣದ ಶಂಬೂಕ ಪ್ರಸಂಗದಲ್ಲಿ ಕಂಡುಬರುವುದಿಲ್ಲ. ಈ ಎರಡೂ ಪಾತ್ರಗಳಲ್ಲಿ ಸಂವಾದವನ್ನು ನಡೆಸಿದ್ದಾರೆ. ಇಲ್ಲಿ ವೃಕ್ಷಭೈರವ ಶಂಬೂಕಾಶ್ರಮದ ಕಾವಲುಗಾರನಾದರೆ, ಮೃತ್ಯುದೇವತೆಯು ಅವನಿಗೆ ಅಗೌರವ ತೋರಿದ ಬ್ರಾಹ್ಮಣನಿಗೆ ಅವನ ಮಗನಿಗೆ ಸಾವನ್ನುಂಟು ಮಾಡುವುದಕ್ಕಾಗಿ ಬಂದಿರುತ್ತದೆ.

ಮೂಲ ರಾಮಾಯಣದಲ್ಲಿ ಬ್ರಾಹ್ಮಣನ ಆರೋಪವನ್ನು ಒಪ್ಪಿ ಶಂಬೂಕನನ್ನು ವಧಿಸಿದರೆ, ಇಲ್ಲಿ ಅದಕ್ಕೆ ವಿರುದ್ಧವಾಗಿ ಶೂದ್ರನು ತಪಸ್ಸಿಗೆ ಅನರ್ಹನು ಎಂದಾಗ ಈ ಬ್ರಾಹ್ಮಣನಿಗೆ ಸರಿಯಾದ ಬುದ್ಧಿ ಕಲಿಸುವೆನು, ವರ್ಣಾಂಧನೂ ಶಾಸ್ತ್ರ ಮೂರ್ಖನೂ ಆದವನಿಗೆ ಎಂದು ಶ್ರೀರಾಮನು ಮನಸ್ಸಿನಲ್ಲೇ ನಿರ್ಧರಿಸುವನು.

ಕುವೆಂಪುರವರು ಶ್ರೀರಾಮನು ಬ್ರಾಹ್ಮಣನ ಆರೋಪದಿಂದ ಪ್ರೇರಿತನಾಗಿ, ಬುದ್ಧಿ ಕಲಿಸುವುದಕ್ಕಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವನು. ಪ್ರಯೋಗಿಸುವ ಮುನ್ನ 'ನಿನ್ನ ಅರಿಯನ್ ಹುಡುಕಿ ಕೊಲ್' ಎಂದು ಆಜ್ಞಾಪಿಸುವನು. ಅದರಂತೆ ಬ್ರಹ್ಮಾಸ್ತ್ರವು ಶಂಬೂಕ ಮುನಿಗೆ ವಂದಿಸಿ ಬ್ರಾಹ್ಮಣನ ಕಡೆ ಬರುತ್ತದೆ. ಹೆದರಿದ ಬ್ರಾಹ್ಮಣನು ಶ್ರೀರಾಮನ ಮಾರ್ಗದರ್ಶನದಂತೆ ಶಂಬೂಕಮುನಿಗೆ ವಂದಿಸುವನು. ಮೃತ್ಯುದೇವತೆ ಸಂತಸಗೊಂಡು ಆಶ್ರಮದ ಹೊರಗೆ ಹೊರಡುವಳು. ಬ್ರಾಹ್ಮಣಕುಮಾರನು ಎದ್ದು

ಪುನರ್ಜನ್ಮ ಪಡೆದು ಶ್ರೀರಾಮನಿಗೆ ಮತ್ತು ಶಂಬೂಕ ಮಹರ್ಷಿಗೆ ತನ್ನ ತಂದೆಯೊಡನೆ ಕೂಡಿ ವಂದಿಸುವನು. ಇಲ್ಲಿ ಬ್ರಾಹ್ಮಣನಿಗೆ ಜ್ಞಾನೋದಯವಾಗುತ್ತದೆ. ತನ್ನ ಶಾಸ್ತ್ರಗರ್ವ, ವರ್ಣಗರ್ವದ ಅಹಂಕಾರ ಭಾವನೆ ಅಳಿಸಿ ಹೋಗಿ ತಪಸ್ಸು ಶ್ರೇಷ್ಠ ಹಾಗೂ ತಪಸ್ಸು ಮಾಡುವವನೂ ಶ್ರೇಷ್ಠ ಎಂಬುದು ಕಲಿತು ಅವನ ಮನಃಪರಿವರ್ತನೆಯಾಗುತ್ತದೆ.

ಕುವೆಂಪು ನಾಟಕದಲ್ಲಿ ರಸ ಪ್ರತಿಪಾದನೆ ಬಗ್ಗೆ ಹೆಚ್.ಎಸ್.ರಾಮಚಂದ್ರೇ-ಗೌಡರು ಈ ರೀತಿ ಹೇಳಿದ್ದಾರೆ. "ಶೂದ್ರತಪಸ್ವಿಯ ನಾಟಕ ದಲ್ಲಿ ಬ್ರಾಹಣನ ಅಸೂಯೆ ಮಾನವ ಸಹಜವಾದದ್ದಲ್ಲ, ಮೂಡತನ ಮತ್ತು ಮೂರ್ಖ ತನದಿಂದ ಕೂಡಿದ್ದು, ಇದೇ ವೈಯಕ್ತಿಕ ಗರ್ವಕ್ಕೆ ಕಾರಣವಾಗಿದೆ. ಈ ಅಸೂಯೆ ಹುಟ್ಟುವುದು ಈ ಮೂಲದಿಂದಲೇ. ಈತನ ಮಗನೂ ಈ ಗುಣಗಳ ಪ್ರತೀಕವಾಗಿದೆ. ಈ ಮೂಡತ್ವದ ನಿವಾರಣೆಯೇ ಈ ನಾಟಕದ ಪರಿಣಾಮ. ವೈದಿಕ ಮೌಲ್ಯಗಳ ಪ್ರತೀಕವೇ ಬ್ರಾಹ್ಮಣಪಾತ್ರ, ಅವನ ಮಗನ ಮರಣ ಇವುಗಳ ಪರೀಕ್ಷೆ, ಸಾರ್ವಕಾಲಿಕ ಮೌಲ್ಯದ ಪ್ರತಿನಿಧಿ ಶಂಬೂಕ ಮಹರ್ಷಿ ಈ ಮೌಲ್ಯಗಳನ್ನು ನಿರ್ಧಿಷ್ಟಪಡಿಸುವುದೇ ಶ್ರೀರಾಮ-ನಾಗಿದ್ದು, ನಾಟಕದ ಕೊನೆಯಲ್ಲಿ ಶಾಂತಿ ನೆಲೆಸುತ್ತದೆ.[೧]

ಕುವೆಂಪುರವರ ಬಹುಮುಖ್ಯ ಬದಲಾವಣೆ ಎಂದರೆ, ಮೂಲ ರಾಮಾಯಣಕ್ಕೆ ವಿರುದ್ಧವಾಗಿ ದಲ್ಲಾದಂತೆ ಶಂಬೂಕ ಮಹರ್ಷಿ ಪಾತ್ರವನ್ನು ಮೇಳೈಸಿದ್ದಾರೆ. ಆ ಪಾತ್ರಕ್ಕೆ ಗೌರವ, ಶ್ರೇಷ್ಠತಮವಾದ ಸ್ಥಾನ ನೀಡಿದ್ದಾರೆ. ಅದರಂತೆ ಶ್ರೀರಾಮನ ಪಾತ್ರಕ್ಕೆ ಆದರ್ಶ ತತ್ವವನ್ನು ನೀಡಿದ್ದಾರೆ. ಅದೇ ರೀತಿ ಶ್ರೀರಾಮನ ಪಾತ್ರಕ್ಕೆ ಚ್ಯುತಿ ಬರದಂತೆ ಮಾಡಿದ್ದಾರೆ. ಇಲ್ಲಿ ನಂಜು ಅಮೃತವಾಗುವಂತೆ ಮಾಡಿದ್ದಾರೆ. ಇಲ್ಲಿ ಬ್ರಾಹ್ಮಣನ ಮಗನ ಸಾವಿಗೆ ಅವನು ತಪಸ್ವಿಯನ್ನು ಅವಜ್ಞೆಗೈದದ್ದನ್ನೇ ಕಾರಣ ಮಾಡಿದ್ದಾರೆ. ಇಲ್ಲಿ ಶ್ರೀರಾಮ ಬ್ರಾಹ್ಮಣನಿಗೆ ನಮಸ್ಕರಿಸುವುದು ಮಾತ್ರವಲ್ಲದೆ ಬ್ರಾಹ್ಮಣನೂ ನಮಸ್ಕರಿಸುವಂತೆ ಮಾಡಿದ್ದಾನೆ. ಇಲ್ಲಿ ಶಂಬೂಕ ಮಹರ್ಷಿಯ ಪಾತ್ರವು ಗೌಣ್ಯವಾಗಿದ್ದರೂ ನಾಟಕದಲ್ಲಿ ಮಹಾಶಕ್ತಿಯಾಗಿ ಆವರಿಸುವಂತೆ ಮಾಡಿದ್ದಾರೆ.[೨]

**ಬದಲಾವಣೆಯ ಪ್ರಸಂಗಗಳು:** ಕುವೆಂಪುರವರ 'ಶೂದ್ರತಪಸ್ವಿ' ನಾಟಕದ ಮೊದಲನೆಯ ದೃಶ್ಯದಲ್ಲಿ ವೃಕ್ಷಭೈರವ ಮತ್ತು ಮೃತ್ಯು ದೇವತೆಯ ಸಂವಾದವಿದೆ. ವೃಕ್ಷಭೈರವನು ಬಹುಸಂಖ್ಯೆಯ ತೋಳುಗಳಲ್ಲಿ, ತ್ರಿಶೂಲಾಯುಧ ಪಂಕ್ತಿ ಸಾಲ್ಗೊಂಡು ಸೇನಾ

---

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ - ಸಂಪಾದಕರು, ದೇಜಗೌ - ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೩೧

೨. ಮಳಲಿ ವಸಂತಕುಮಾರ್- ಕುವೆಂಪು ನಾಟಕ, ಸಂಪಾದಕರು, ದೇಜಗೌ, ಪಾತ್ರ ಚಿತ್ರಣ-ಸಹ್ಯಾದ್ರಿಪ್ರಕಾಶನ, ೧೯೭೭, ಪುಟ. ೪೭

ವ್ಯೂಹದಂತೆ ಭಯಂಕರವಾಗುತ್ತದೆ, ಕ್ಷುದ್ರನಾಗಿ ಉರಿಗಣ್ಣನ್ನು ಹೊಂದಿರುತ್ತಾನೆ. ಮೃತ್ಯುವು ಶಂಬೂಕಾಶ್ರಮವನ್ನು ಪ್ರವೇಶಿಸಲು ಬಂದಾಗ ಶಂಬೂಕಾಶ್ರಮದ ಮಹಾದ್ವಾರದಲ್ಲಿ ಕಾವಲು ನಿಂತಿರುವ ವೃಕ್ಷಭೈರವನು ಮೃತ್ಯುವನ್ನು ಕುರಿತು

ವೃಕ್ಷಭೈರವ : ನಿಲ್ ನಿಲ್! ಅಲ್ಲಿಯೇ ನಿಲ್!
ಹತ್ತೆ ಸಾರದಿರ್। ಅತ್ತಲ್ ತೊಲಗತ್ತಲ್। ಅತ್ತಲ್
ಆರ್ ನೀನ್। ನಿನಗೇನಿಲ್ಲಿ ಕಜ್ಜಂ ಘೋರಮುಖಿ?

ಮೃತ್ಯು : (ಭಯಂಕರವಾಗಿ)
ಪೆಸರ್‌ಗೇಳ್ವ ಕೆಚ್ಚಿರ್ಪುದೇನ್ ನಿನಗೆ?

ವೃಕ್ಷಭೈರವ : ಇರ್ಪುದರಿಂದಲೆ ಕೇಳ್ದನ್, ವಿಕೃತವದನೆ
ಅಧಿಕ ಪ್ರಸಂಗಿಯಾಗದಿರ್।

ಮೃತ್ಯು : ಆ ಗರ್ವಮಿರ್ಕೆ ಕೇಳ್
ಮೃತ್ಯುವೆನ್। ದುರ್ ಮೃತ್ಯುವೆನ್
ಪುಗಲ್ ಬಯಸಿ ಬಂದಿರ್ಪೆನ್
ಈ ತಪೋವನಕೆ।

ಮೃತ್ಯುವು ಧರ್ಮದೇವತೆಯ ಆಜ್ಞೆಯಪ್ರಕಾರ- ಪಾರ್ವನೊಬ್ಬನು ಶಂಬೂಕ ಮಹರ್ಷಿಯನ್ನು ಅವಜ್ಞೆಗೈದಿದ್ದರಿಂದಾಗಿ ಆತನನ್ನು ಅವನ ಮಗನ ಸಾವಿನ ರೂಪದಲ್ಲಿ ಶಿಕ್ಷಿಸಲು ಈ ತಪೋವನಕೆ ಬಂದಿರುವನು? ಎಂದು ವೃಕ್ಷಭೈರವನಿಗೆ ಮನದಟ್ಟು ಮಾಡುತ್ತದೆ.

ಇದು ಕುವೆಂಪುರವರ ಮೂಲ ರಾಮಾಯಣದಲ್ಲಿ ಇಲ್ಲದ ಹೊಸ ಸೃಷ್ಟಿಯಾಗಿದೆ. ವೃದ್ಧ ಬ್ರಾಹ್ಮಣನು ಶೂದ್ರನೊಬ್ಬನ ತಪಸ್ಸಿನ ಪ್ರಭಾವವೇ ತನ್ನ ಮಗನ ಅಕಾಲ ಮೃತ್ಯುವಿಗೆ ಕಾರಣವೆಂದು ಶ್ರೀರಾಮನಿಗೆ ತಿಳಿಸಿದಾಗ ಶ್ರೀರಾಮನು ಆಲೋಚಿಸುವ ಕ್ರಮದಲ್ಲಿ ಸಂಪೂರ್ಣ ಬದಲಾವಣೆಯನ್ನು ತಂದಿದ್ದಾರೆ. ಹಾಗೆಯೇ ಶಂಬೂಕನಿಗೆ ಮಹರ್ಷಿಪಟ್ಟವನ್ನು ನೀಡುತ್ತಾನೆ.

ಶ್ರೀರಾಮ : ಈ ವರ್ಣ ಗರ್ವಾಂಧರಿಗೆ
ಈ ಶಾಸ್ತ್ರ ಮೂರ್ಖಂಗೆತೊ ಬುದ್ದಿಗಲಿಪೆನ್
ಶಂಬೂಕನ್ ಮಹಾಯೋಗಿ
ತಪಸ್ವಿಯ ತಿರಸ್ಕೃತಿಗೆ ಮುನಿದ ಧರ್ಮಂ
ತಂದುದೀತನ ಮುದ್ದುಕಂದಂಗೆ

ನನ್ನ ರಾಜ್ಯದೊಳ್ ಅಕಾಲ ಮೃತ್ಯುವಂ
ತನ್ನ ತಪ್ಪನೆ ತಿಳಿಯಲಾರ ದೀತನ್
ಮರೆಯಿಂದ ಮೆನ್ನನ್
ಬಹಿರಂಗಮಾ ಶಂಬೂಕಯೋಗಿಯನ್
ನಿಂದಿಸುತ್ತಿರ್ಪನ್

ಶ್ರೀರಾಮನ ತಪಸ್ವಿಯಾದ ಶಂಬೂಕ ಯೋಗಿಯನ್ನು ತಿರಸ್ಕರಿಸಿದ್ದರಿಂದಲೇ ಧರ್ಮ ಮುನಿದು ಬ್ರಾಹ್ಮಣ ಮಗ ಮರಣ ಹೊಂದಿದ್ದಾನೆ ಎಂದು ತರ್ಕಿಸುತ್ತಾನೆ.

ಶ್ರೀರಾಮನು ಪಾರ್ವನೊಡನೆ ಶಂಬೂಕಾಶ್ರಮಕ್ಕೆ ಪ್ರವೇಶಿಸಿದಾಗ ಪಾರ್ವನು ತನ್ನ ಮಗ ಸತ್ತುಬಿದ್ದುದ್ದನ್ನು ನೋಡಿ ದುಃಖ ಮರುಕಳಿಸಿ, ರೋಧಿಸುತ್ತಾ ಕುಸಿದು ಬೀಳುತ್ತಾನೆ. ಇದನ್ನು ಕಂಡು ಶ್ರೀರಾಮನ ಮನಸ್ಸು ಕರಗುತ್ತದೆ. ಶ್ರೀರಾಮನು ತನ್ನೊಳಗೆ,

ಸ್ಥಿತಪ್ರಜ್ಞಂಗು ಅದೈರುಮನೊಡರ್ಚುವುದೀ
ಪುತ್ರಶೋಕದ ದೃಶ್ಯಮೇಗಳುಂ
ನನ್ನಗಲ್ಕೆಗಂದು ಎದೆಬಿಲಿಯಲ್ ಪಳಯಿಸಿದಾ
ನನ್ನಯ್ಯನಂ ಬಗೆಗೆ ತರ್ಪನೀ ಮುದುಕ ತಂದೆ

ದುಃಖವು ಬ್ರಾಹ್ಮಣನದ್ದೇ ಆದರೂ ಶ್ರೀರಾಮನು ಶಂಬೂಕನ ತಪಸ್ಸನ್ನು ಗೌರವಿಸುವಂತೆ ಬ್ರಾಹ್ಮಣನ ದುಃಖಕ್ಕೂ ಮನಸ್ಸು ಕರಗುತ್ತದೆ. ಈ ಎರಡೂ ಸಂದರ್ಭಗಳಲ್ಲಿ ವಿವೇಚನೆಯನ್ನು ಶ್ರೀರಾಮನು ಕಳೆದುಕೊಳ್ಳುವುದಿಲ್ಲ. ಶ್ರೀರಾಮನು ರೋಧಿಸುತ್ತಿರುವ ಬ್ರಾಹ್ಮಣನಿಗೆ ಧೈರ್ಯ, ಸಾಂತ್ವನವನ್ನು ನೀಡಿ, 'ನಡೆದೊಂದಧರ್ಮಮಂ ಪರಿಹರಿಸಲೊಡಂ ಅಮೃತನಕ್ಕುಮ್ ನಿನ್ನೀ ಚಿರಂಜೀವಿ'! ಎನ್ನಲು ಪಾರ್ವನು ಸಂತಸದಿಂದ ಶ್ರೀರಾಮ ಜೊತೆ ತೆರಳಿ ಶಂಬೂಕ ಯೋಗಿಯನ್ನು ತೋರಿಸುವನು. ಶ್ರೀರಾಮನು 'ತಪೋಮಹಿಮೆಗೆಣೆಯುಂಟೆ'? ಎಂದು ಶಂಬೂಕ ಮಹರ್ಷಿಗೆ ಕೈಮುಗಿಯುವನು. ನಂತರ ಶ್ರೀರಾಮನು ಪಾರ್ವನೊಂದಿಗೆ ತನ್ನ ಮನಸ್ಸಿನಲ್ಲಿ ಉದಿಸಿದ ಸಂದೇಹವನ್ನು ನಿವಾರಿಸಿಕೊಳ್ಳುವನು.

ಶ್ರೀರಾಮ : ತಪಂ ಪೂಜ್ಯಕರ್ಮಮಲ್ತೆ, ದ್ವಿಜೇಂದ್ರ
ಬ್ರಾಹ್ಮಣ : ತಪಕ್ಕಣೆಯುಂಟೆ –ರಾಘವೇಂದ್ರ
ಶ್ರೀರಾಮ : ತಪಂಗೆಯ್ವನುಂ ಪೂಜ್ಯನಲ್ತೆ ವಿಬುಧವರ್ಯೆ?
ಬ್ರಾಹ್ಮಣ : ದಿಟಂ ಧರ್ಮ ಮೂರ್ತಿ
ಶ್ರೀರಾಮ : ಪೂಜ್ಯ ಹನನಂ ಪಾಪಕರಮಲ್ತೆ, ಸತ್ವಶೀಲು?

ಬ್ರಾಹ್ಮಣ : ನಿಸ್ಸಂಶಯಂ ವಾಲಿಸಂಹಾರಿ,

ಶ್ರೀರಾಮ : ಅಂತೆವೋಲ್

ಈ ತಪಸ್ವಿಯಂ ಕೊಲ್ವುದುಂ ಪಾಪ ಮಾಗದೇ?

ಬ್ರಾಹ್ಮಣ : ತಪಕ್ಕನಧಿಕಾರಿ ಶೂದ್ರನ್

ಎಂಬುವದು ಶಾಸ್ತ್ರ ಪ್ರಸಿದ್ಧಂ

ಹೀಗೆ ಶ್ರೀರಾಮನು ಪಾರ್ವನನ್ನು ಮನಃ ಪರಿವರ್ತನೆಗೆ ಪ್ರಯತ್ನಿಸಿದರೂ ಸಾಧ್ಯವಾಗದೇ ಬಾಣಪ್ರಯೋಗಕ್ಕೆ ಮುಂದಾಗುತ್ತಾನೆ. ಅದಕ್ಕೆ ಪಾರ್ವನ ಒಪ್ಪಿಗೆಯನ್ನು ಪಡೆದು ಅವನ ಮಾತಿನಂತೆ ರಾವಣನ ದಶಶಿರಗಳನ್ನು ಉರುಳಿಸಿದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವನು. ಬ್ರಹ್ಮಾಸ್ತ್ರವು 'ಅರಸಿ ಕೊಲ್ ಅರಗುಲಿಯನ್' ಎಂಬ ಶ್ರೀರಾಮನ ಆಜ್ಞೆಗೆ ಅನುಸಾರವಾಗಿ ಶಂಬೂಕ ಮಹರ್ಷಿಯ ಬಳಿ ಬಂದು ತನ್ನ ಉಗ್ರತೆಯನ್ನು ಅಳಿದು ವಿನೀತವಾಗಿ, ಶಂಬೂಕ ಮಹರ್ಷಿಗೆ ನಮಸ್ಕರಿಸಿ ಬಲಗೊಂಡು ಅಡ್ಡ-ಬೀಳುತ್ತದೆ. ಕುವೆಂಪುರವರ ಈ ನಾಟಕದ ಕೊನೆಯ ಘಟ್ಟದಲ್ಲಿ ಕಂಡುಬಂದಂತಹ ಅತಿ ಮುಖ್ಯವಾದ ಬದಲಾವಣೆಯ ಪ್ರಸಂಗವೆಂದರೆ, ಪಾರ್ವನಿಗೆ ಜ್ಞಾನೋದಯ-ವಾಗುವುದು.

ಬ್ರಹ್ಮಾಸ್ತ್ರವು ನಿಷ್ಫಲವಾದ್ದದಕ್ಕೆ ಶೂದ್ರನ ತಪಸ್ಸಿಗೆ ಕಾರಣ ಎಂದು ಪಾರ್ವನ ನುಡಿಗೆ ಶ್ರೀರಾಮ ಬ್ರಹ್ಮಾಸ್ತ್ರ ನಿಷ್ಫಲವಾಗದು, ಈಗಲೇ ಆಗುವುದು, ಸಫಲವಾಗುವುದು ಎಂದಾಗ ಋಷಿಗೆ ಮರ್ಯಾದೆ ಸಲ್ಲಿಸಿ ತನ್ನ ಹಗೆಯನ್ನು ದ್ವಂಸ ಮಾಡಲು ಬರುತ್ತಿರುವುದು.

ಬ್ರಾಹ್ಮಣ – ಅರನ್

ಶ್ರೀರಾಮ – ಅಧರ್ಮಿಯನ್

ಬ್ರಾಹ್ಮಣ – ಆ ಶೂದ್ರನನೆ

ಶ್ರೀರಾಮ – ಅಲ್ತಲ್ತು ಬ್ರಾಹ್ಮಣ ವರೇಣ್ಯನನ್

ಬ್ರಾಹ್ಮಣ – ಬ್ರಾಹ್ಮಣ ವರೇಣ್ಯನನ್

ಶ್ರೀರಾಮ – ಪೂಜ್ಯರನ್ ಅವಜ್ಞೆಗೆಯ್ದಾತನನ್

ಶಾಸ್ತ್ರ ಸಂಭ್ರಾಂತನನ್, ದುರ್ವಿನೀತನನ್

ಬ್ರಾಹ್ಮಣ – ಆ಼ಃ

ಶ್ರೀರಾಮ – ನಿನ್ನನ್ ದ್ವಿಜೋತ್ತಮ

ಬ್ರಾಹ್ಮಣ ಗಾಬರಿಯಾಗುತ್ತಾನೆ. ರಕ್ಷಿಸೆಂದು ಶ್ರೀರಾಮನನ್ನು ಬೇಡುತ್ತಾನೆ. ಆದರೆ 'ನೀಮ್ ಅವಜ್ಞೆಗೆಯ್ದುದು ನನ್ನನಲ್ತು' ಎಂದು ಹೇಳಿದ ಶ್ರೀರಾಮ ಶಂಬುಕನ ಕ್ಷಮೆ ಕೇಳಲು ಸೂಚಿಸುತ್ತಾನೆ. ಆಗ ಮಾತ್ರ 'ತಂದೆಯ ಬರ್ದುಕುವನ್ ಕಂದನುಂ ಬಳ್ದಪನ್' ಎನ್ನುತ್ತಾನೆ. ಆಗ ಬ್ರಾಹ್ಮಣ ಶ್ರೀರಾಮನನ್ನು ಕುರಿತು

ಬೊಧಮಾಯ್ತನಗೀಗಳ್- ಮಹಾಪ್ರಾಜ್ಞ
ಬುದ್ದಿಗಲಿಸಿದಯ್ ಸಂಪ್ರದಾಯಬದ್ದಂಗೆ
ಶಾಸ್ತ್ರಮೂಢಂಗೆ 'ಜಾತಿ ಗರ್ವಾಂಧಗೆ
ಅವ ಜಾತಿಯ ತರವೋ? ಇಂಧನಕೆ ಹೊರತುಂಟೆ
ಬೆಂಕಿಗೇಂ ಭೇದಮೆ!ದಳ್ಳುರಿಗೆ ದಾಕ್ಷಿಣ್ಯವೇ
ಆರಾದರೇನ್ ಆರಾಧ್ಯರ್ ತಪೋಧನರ್
ನಮಸ್ಕಾರಮೆ ಪುಣ್ಯಂ: ತಿರಸ್ಕಾರಮಪಾಪಂ

ಎಂದು ಶಂಬೂಕಮುನಿಗೆ ನಮಸ್ಕರಿಸಿ ಬ್ರಹ್ಮಾಸ್ತ್ರದಿಂದ ತಪ್ಪಿಸಿಕೊಂಡು ತಾನೂ ಉಳಿದು ತನ್ನ ಕಂದನನ್ನು ಉಳಿಸಿಕೊಂಡು ಪಶ್ಚಾತ್ತಾಪದಿಂದ, ಜ್ಞಾನೋದಯವಾಗಿ ನಾಟಕ ಮುಗಿಯುತ್ತದೆ.

ಒಟ್ಟಿನಲ್ಲಿ ಕುವೆಂಪುರವರು 'ಶೂದ್ರತಪಸ್ವಿ' ನಾಟಕದಲ್ಲಿ ಮಾಡಿರುವ ಬದಲಾವಣೆಗಳಿಂದಾಗಿ ಕುವೆಂಪುರವರದಲ್ಲಿದ್ದ ವರ್ಣಾಶ್ರಮ ಪದ್ಧತಿ ವಿರೋಧಿ ಭಾವನೆ, ಅವರ ವೈಚಾರಿಕ ನಿಲುವು, ಸೃಜನಶೀಲತೆ, ಸಾಮಾಜಿಕ ಒಲವು, ಗುಣಗಳು ತಿಳಿಯುತ್ತವೆ.

ಈ ನಾಟಕದಲ್ಲಿ ಶ್ರೀರಾಮನು ನಾಯಕನಾಗಿದ್ದು, ಪುರಾಣದಲ್ಲಿ ಶ್ರೀರಾಮನಿಗೆ ಅಂಟಿದ್ದ ಶಾಪವನ್ನು ಕುವೆಂಪು ಶೂದ್ರತಪಸ್ವಿ ನಾಟಕದಲ್ಲಿ ತೊಡೆದು ಹಾಕಿದ್ದು, ಭಾರತೀಯ ಸಮಾಜದಲ್ಲಿ ಶ್ರೀರಾಮನನ್ನು 'ಮರ್ಯಾದಾಪುರುಷೋತ್ತಮ'ನನ್ನಾಗಿ ನ್ಯಾಯಪಾಲಕನನ್ನಾಗಿ ಮಾಡಿ ಮೂಲದಲ್ಲಿ ಅಂಟಿದ್ದ 'ಶಂಬೂಕ ಹತ್ಯೆ' ದೋಷವನ್ನು ನಿವಾರಿಸಿದ್ದಾರೆ.

ಅದೇ ರೀತಿ ಈ ನಾಟಕದ ಖಳನಾಯಕ ಬ್ರಾಹ್ಮಣನಾಗಿದ್ದು, ಅವನಿಗೆ ಕೊನೆಗೆ ಆತನ ವರ್ಣ, ಕುಲ, ಜಾತಿ, ಶಾಸ್ತ್ರ, ಸಂಪ್ರದಾಯದ ಗರ್ವವನ್ನು ಕಳಚಿ "ಎಲ್ಲರೂ ಎಲ್ಲದಕ್ಕೂ ಯೋಗ್ಯರು" ಎಂಬ ಜ್ಞಾನದ ಸವಿಯನ್ನು ಉಣಬಡಿಸಿದ್ದಾರೆ.

ಈ ನಾಟಕದ ಪ್ರಧಾನ ಕೇಂದ್ರ ಪಾತ್ರವೆಂದರೆ ಶಂಬೂಕ ಮಹರ್ಷಿ ಇಲ್ಲಿ ಶಂಬೂಕನ ಪಾತ್ರವು ಗೌಣವಾಗಿದ್ದು ಶಂಬೂಕನಿಗಿಂತ ಶ್ರೀರಾಮನ ಪಾತ್ರ ಹೆಚ್ಚಾಗಿ ವಿಜೃಂಭಿಸಿದೆ.

ಕುವೆಂಪು ನಾಟಕ ಅಧ್ಯಯನದಲ್ಲಿ ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯ ಹೇಳಿರುವಂತೆ 'ಶ್ರೀರಾಮನ ಇಲ್ಲಿ ಪ್ರಧಾನ ಸಂಸ್ಕೃತಿಯ ವಕ್ತಾರ. ಈ ನಾಟಕ ಶಂಬೂಕನ ಗೆಲುವಿಗಿಂತ ಶ್ರೀರಾಮಚಂದ್ರನ ಗೆಲುವನ್ನು ಚಿತ್ರಿಸುತ್ತದೆ. ಬ್ರಾಹ್ಮಣನನ್ನು ತಿರಸ್ಕರಿಸುವ ಕುವೆಂಪು ಅವರಿಗೆ ಶ್ರೀರಾಮನನ್ನು ತಿರಸ್ಕರಿಸಲು ಸಾಧ್ಯವಾಗದೇ ಇರುವುದು ನಮ್ಮ ಸಂಸ್ಕೃತಿಯ ಚರಿತ್ರೆಯಲ್ಲಿ ಕುತೂಹಲದಿಂದ ಗಮನಿಸಬೇಕಾದ ಸಂಗತಿಯಗಿದೆ.

ಇಲ್ಲಿ ವ್ಯಕ್ತಿಯ ಕಾಯಕವನ್ನು ನೋಡಿ ಗೌರವಿಸಬೇಕೇ ವಿನಃ ಅವನ ಮೂಲ ಹುಟ್ಟು, ಜಾತಿ, ಧರ್ಮದ ಆಧಾರದ ಮೇಲಲ್ಲಾ ಎಂಬುದನ್ನು ಕುವೆಂಪು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಇದು ಇವರಲ್ಲಿರುವ ಸಮಾಜವಾದ, ಸಮತಾವಾದ, ಮಾರ್ಕ್ಸ್‌ವಾದ ಗಳನ್ನು ಎತ್ತಿ ಹಿಡಿಯುತ್ತದೆ.

ಪಾರ್ವನು ಶಂಬೂಕ ಮಹರ್ಷಿಗೆ ಮಾಡಿದ ಅಪವಾದದಲ್ಲಿ ಶ್ರೀರಾಮನು 'ಈ ವರ್ಣಗರ್ವಾಂಧನಿಗೆ ಬುದ್ಧಿಕಲಿಪೆನ್' ಎಂದು ತನ್ನಲ್ಲೇ ಹೇಳಿಕೊಳ್ಳುತ್ತಾ ಶ್ರೀರಾಮ ಪಾತ್ರದಲ್ಲಿ ಬದಲಾವಣೆ ಹೊಸ ಚಿಂತನಾಕ್ರಮವನ್ನು ಸೃಷ್ಟಿಸಿದ್ದಾರೆ.

ಶಂಬೂಕನಿಗೆ ಮಹರ್ಷಿ ಪಟ್ಟವನ್ನು ಶ್ರೀರಾಮನಿಂದಲೇ ದಯಪಾಲಿಸಿದ್ದಾರೆ ಇದು ಕುವೆಂಪುರವರ ಸಾಮಾಜಿಕ ಕ್ರಾಂತಿಯ ಹೆಜ್ಜೆಯಾಗಿದೆ.

ಡಾ.ರಮೇಶ್‌ಚಂದ್ರದತ್ತರವರು ಶೂದ್ರತಪಸ್ವಿ ನಾಟಕದ ಬಗ್ಗೆ ಹೇಳುತ್ತಾ 'ಧರ್ಮದ ಹೆಸರಿನಲ್ಲಿ ವರ್ಣ ಹಾಗೂ ವರ್ಗ ಪ್ರತಿಪಾದನೆ ಮಾಡುವ ಪುರೋಹಿತಶಾಹಿಯನ್ನು ದಿಕ್ಕರಿಸುವಂತೆ ಕರೆನೀಡುವ ಕುವೆಂಪು ಅವರು ತಮ್ಮ ಸಾಹಿತ್ಯ ಸೃಷ್ಟಿ ಸಂದರ್ಭದಲ್ಲಿ ಪ್ರಾಚೀನ ಕೃತಿಯಲ್ಲಿರುವ ಅನ್ಯಾಯಗಳನ್ನು ಗುರುತಿಸಿ ಆ ಕಾವ್ಯ ಸಂದರ್ಭಗಳಿಗೆ ಅಥವಾ ಆಯಾ ಪಾತ್ರಗಳಿಗೆ ನ್ಯಾಯ ಒದಗಿಸುವ ಕೆಲಸವನ್ನು ಚಿಕಿತ್ಸಕನ ಉಪಾದಿಯಲ್ಲಿ ಮಾಡಿರುವುದನ್ನು ಗುರುತಿಸಬಹುದಾಗಿದೆ. ಅವರ 'ಶೂದ್ರತಪಸ್ವಿ ನಾಟಕ' ಅಂತಹ ಒಂದು ಪ್ರಯತ್ನವಾಗಿದೆ ಎಂದು ಹೇಳಿದ್ದಾರೆ.[೧]

**ನಾಟಕ– ಬೆರಳ್‌ಗೆ ಕೊರಳ್**

ಏಕಲವ್ಯನು ಹಿರಣ್ಯಧನುಷನೆಂಬ ವ್ಯಾದನ ಮಗ. ಅತನು ದ್ರೋಣ ಮಹಿಮೆ ಯನ್ನು ಕೇಳಿ ಆತನಿಂದ ಬಿಲ್ವಿದ್ಯೆಯನ್ನು ಕಲಿತು ಬರುವುದಾಗಿ ತಂದೆಯನ್ನು ಬೇಡುತ್ತಾನೆ. ತಂದೆಯು ಅವರು ಪಾರ್ವರು, ಬೇಡರಿಗೆ ಬಿಲ್ವಿದ್ಯೆ ಕಲಿಸಲು ಒಪ್ಪರು,

೧. ಕುವೆಂಪು–ಪುನರ್ಮನನ – ಶ್ರೀ ಕುವೆಂಪು ಜನ್ಮಶತಮಾನೋತ್ಸವ ವರ್ಷ ೨೦೦೪, ಪ್ರಸಾರಾಂಗ, ಮೈಸೂರು ವಿ.ವಿ. ೨೦೦೪, ಸಂಪಾದಕರು: ಪ್ರೊ. ಕೆ.ಭೈರಪ್ಪ ಮತ್ತು ಪ್ರೊ. ಅರವಿಂದ ಮಾಲಗತ್ತಿ, ಪುಟ. ೧೪೦

ನಿನ್ನನ್ನು ಹೊರಗೆ ನೂಕಿ ಗಹಗಹಿಸಿ ನಗುವರು, ಎಂದು ಹೇಳಿದರೂ ಹಠ ಬಿಡದೆ ಮಗನು ತಂದೆಯ ಕಾಲನ್ನು ಹಿಡಿದು, ಎಂತಾದರೂ ಗುರುವನ್ನು ಒಪ್ಪಿಸಿ ಕಲಿತು ಬರುವೆನೆಂದು ದೈನ್ಯದಿಂದ ಬೇಡುತ್ತಾನೆ. ತಂದೆ ಹರಸಿ ಕಳುಹಿಸಿಕೊಡುತ್ತಾನೆ. ಅರಸೂರಿಗೆ ಹೋದ ಏಕಲವ್ಯನಿಗೆ ಅಶ್ವತ್ಥಾಮನ ಸ್ನೇಹ ದೊರೆತು ಅವನ ಮೂಲಕ ಗುರು ದ್ರೋಣನ ಪರಿಚಯವಾಗುತ್ತದೆ. ದ್ರೋಣನು ಶೂದ್ರನೆಂಬ ಕಾರಣಕ್ಕೆ ಏಕಲವ್ಯನನ್ನು ತಿರಸ್ಕರಿಸಲಿಲ್ಲ, ಆತನನ್ನು ಶಿಷ್ಯನನ್ನಾಗಿ ಸ್ವೀಕರಿಸುವನು. ಆದರೆ ತಾನು ಅಸಾಮಾನ್ಯ ಎಂದು ಭಾವಿಸಿರುವ ಅರ್ಜುನನಿಗೆ ಆ ಸಾಮಾನ್ಯನ ಸಂಪರ್ಕ ಸಹ್ಯವೆನಿಸುವುದಿಲ್ಲ. ಆದ್ದರಿಂದ ದ್ರೋಣನು ಏಕಲವ್ಯನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡು ವಿದ್ಯೆಯನ್ನು ಕಲಿಸುತ್ತಾನೆ. ವಿದ್ಯೆ ಸಾಗುತ್ತಿರುವಾಗಲೇ ತಂದೆಯ ಅಕಾಲಿಕ ದುರ್ಮರಣದ ವಾರ್ತೆಯನ್ನು ಕೇಳಿ ಏಕಲವ್ಯನು ಗುರುವಿನ ಹರಕೆಯನ್ನು ಹೊತ್ತು ಮನೆಗೆ ಮರಳಬೇಕಾಗುತ್ತದೆ.

ಆದರೂ ದ್ರೋಣನಂತಹ ಗುರುವಿನ ಬಗ್ಗೆ ಏಕಲವ್ಯನಿಗೆ ಶ್ರದ್ಧಾಭಕ್ತಿಗಳು ಹೆಚ್ಚಾಗಿ ಅವನು ನಿಂತಡೆ, ಕುಳಿತೆಡೆ ತನ್ನ ಸುತ್ತ ಮುತ್ತ ಆ ಗುರುವಿನ ಪ್ರತೀಕವನ್ನೇ ಕೊರೆದು ಸಾಧನೆಯಲ್ಲಿ ತೊಡಗುತ್ತಾನೆ. ಕ್ರಮೇಣ ಧನುರ್ವಿದ್ಯಾಪಾರಂಗತನಾಗುತ್ತಾನೆ.

ಹೀಗಿರಲು ಒಮ್ಮೆ ಅರ್ಜುನನು ಏಕಲವ್ಯನ ಅರಣ್ಯ ರಾಜ್ಯಕ್ಕೆ ಬೇಟೆಗೆಂದು ಬಂದು ಏಕಲವ್ಯನ ಶಬ್ದವೇದಿ ವಿದ್ಯೆಯನ್ನು ಕಂಡು ವಿಸ್ಮಯಗೊಂಡು ಬಿಲ್ವಿದ್ಯೆಯಲ್ಲಿ ತನ್ನನ್ನು ಮೀರಿಸುವ ಮತ್ತೊಬ್ಬನನ್ನು ಕಂಡು ಖೇಧಗೊಳ್ಳುತ್ತಾನೆ. ದ್ರೋಣರನ್ನು ಭೇಟಿಯಾಗಿ ಏಕಲವ್ಯನು ಬಿಲ್ವಿದ್ಯಾ ಪಾರಂಗತನಾಗಿರುವುದನ್ನು ಹಾಗೂ ಇಡೀ ಜಗತ್ತಿಗೆ ಧನುರ್ವಿದ್ಯೆಯಲ್ಲಿ ಏಕಮೇವಾದ್ವಿತೀಯನನ್ನಾಗಿಸುವ ವಚನವಿತ್ತದ್ದನ್ನು ನೆನೆಸುತ್ತಾನೆ. ಅದರಂತೆ ದ್ರೋಣಾಚಾರ್ಯರು ಏಕಲವ್ಯನಲ್ಲಿ ಗುರುದಕ್ಷಿಣೆಯನ್ನು ಪಡೆಯಲು ಅರಣ್ಯ ರಾಜ್ಯಕ್ಕೆ ಹೊರಡಲು ಸಿದ್ಧರಾಗುವರು. ಇದು ತಾತ್ವಿಕತೆಯ ವಿವೇಚನೆಯನ್ನು ಶೋಧಿಸುತ್ತಾ ಹೋಗುತ್ತದೆ.

ಯಾವುದೇ ಒಂದು ಕೃತಿಯಲ್ಲಿ ಒಂದೇ ರಸ ಏಕಮೇವಾದ್ವಿತೀಯವಾಗಿ ನಿಲ್ಲುವುದು ಕಡಿಮೆ. ಪೋಷಕರರಸಗಳು ಒಂದು ಮುಖ್ಯರಸವನ್ನು ಸಮರ್ಥಿಸಿ ಉದ್ದೇಶಿತ ಪರಿಣಾಮ ಸಾಧ್ಯವಾಗುವುದೇ ಹೆಚ್ಚು. ಆದರೆ ಕುವೆಂಪು ನಾಟಕಗಳಲ್ಲಿ ಇದು ಸಾಧ್ಯವಾಗಿದೆ. ಇದಕ್ಕೆ ಕಾರಣ ಸ್ವೀಕೃತ ವಸ್ತುವಿಗಿಂತ ಹೆಚ್ಚಾಗಿ ಅದಕ್ಕೆ ಅಳವಡಿಸಿರುವ ತಾತ್ವಿಕನೆಲೆ, ಬೆರಳ್‌ಗೆ ಕೊರಳ್ – ಶೂದ್ರತಪಸ್ವಿ ಇದಕ್ಕೆ[೧] ಉದಾಹರಣೆಗಳು.

---

೧. ಹೆಚ್.ಎಸ್. ರಾಮಚಂದ್ರೇಗೌಡ, ರಸಪ್ರತಿಪಾದನೆ, ಕುವೆಂಪು ನಾಟಕ ವಿಹಾರ, ಸಂ– ದೇಜಗೌ, ಸಹ್ಯಾದ್ರಿ ಪ್ರಕಾಶನ, ೧೯೭೭, ಪುಟ. ೩೧.

ಏಕಲವ್ಯನು ಗುರುಬರುವ ದಿನ ಜಗತ್ತು ಎಚ್ಚರುವ ಮುನ್ನವೇ ವ್ರತನಿಷ್ಠನಾಗಿ ಗುರುಪೂಜೆಯಲ್ಲಿ ತೊಡಗಿ ಓಂಕಾರಯುಕ್ತವಾದ ಗುರುಸ್ತೋತ್ರವನ್ನು ಪಠಿಸುವನು.

ಇಂದು ಗುರುವೈತಪನೆನ್ನೀ ವನಸ್ಥಲಕೆ
ಪವಿತ್ರ ತರಮಪ್ಪುದೀ ಕಾಡುಮಲೆ ದಿಲ್‌ದಿಟಂ
ಪೂಜ್ಯ ಗುರುಪದ ಧೂಳಿಯಂ!

ಇದೇ ರೀತಿ ಪ್ರಕೃತಿಯ ವ್ಯಾಪದಲ್ಲಿಯೂ ಅದೇ ಭಾವ ಪ್ರತಿಫಲಿತವಾಗಿರುವಂತೆ ಅವನಿಗೆ ಕಾಣುತ್ತದೆ. ಕಂದರದಲ್ಲಿರುವ ಮೋಡ, ಮಂಜುಗಳಿಗೆ ಗುರುವಿನಾಗಮನವನ್ನು ತಿಳಿಸಿ ಸಂತಸದಿಂದ ಕುಣಿಯುವನು.

ವಿಧಿಯ ಶಕುನದ ಮುನ್ಸೂಚನೆಗೆ ತುಸು ಹೊತ್ತು ಚಿಂತಾಮಗ್ನನಾದವನು ಕೂಡಲೇ ಎಚ್ಚೆತ್ತು, ಗುರು ಬರುವ ದಿನ ಚಿಂತೆ ಸಲ್ಲದು "ದುಃಸ್ವಪ್ನ ಮಾದೋಡಂ ದಿವ್ಯೆಂ ದಿಟ। ಇಂತಪ್ಪ ಶುಭದಿನಕೆ ಅದೆಂತಪ್ಪ ನಾದಿಯೊ।" ಎಂದು ಮರುಕಳಿಸುವ ಉತ್ಸಾಹದಿಂದ ಭಕ್ತಿ ಭಾವದ ಆವೇಶದಿಂದಲೇ ಮರೆಯುತ್ತಾನೆ. ಮುಪ್ಪಿನ ತಾಯಿಯ ಅಕ್ಕರೆಯ ಕೂಗು ಕೇಳಿದಾಗಲೇ ಅವನಿಗೆ ಎಚ್ಚರ, ಆ ಏಕಮಾತ್ರ ಪುತ್ರನೆ ಅವಳ ಕಣ್ಣಲೆ, ಬಾಳಲೆ ಅವನೇ ಅವಳ ಉಸಿರು. ಬೆಳಗ್ಗಿನಿಂದ ಮಗನಿಗೆ ಊಟವಿಲ್ಲವೆಂದು ಸಂಕಟದಿಂದ ತಾನೇ ಹಣ್ಣು ಮತ್ತು ಜೇಣುಗಳನ್ನು ಹೊತ್ತು ತಂದಿದ್ದಾಳೆ. ಆದರೆ ಅವರ ಬೇಟೆ ದೇವರನ್ನು ಬಿಟ್ಟು, ಬೇರೆ ದೇವರನ್ನು ಕಾಣದೆ, ಕೇಳದೇ, ತಾಯಿಯ ಅಕ್ಕರೆಯ ಸವಿಮಾತುಗಳಲ್ಲಿ ಮಗ ತಲ್ಲೀನನಾಗುತ್ತನೆ. ತಾಯಿ ತಿಳಿಯುವಂತೆ ತನ್ನ ಬಿಲ್ವಿದ್ಯೆಗೆ ಕಾರಣವಾದ ಗುರುವಿನ ವಿಚಾರವನ್ನು ವಿವರಿಸುತ್ತಾನೆ. ಇವರ ಹಾಸ್ಯಮಯ ಸಂಭಾಷಣೆಯ ನಡುವೆ ಏಕಲವ್ಯನ ಮುದ್ದಿನ ಜಿಂಕೆ, ಹಣ್ಣು, ಜೇನುಗಳನ್ನು ಕಬಳಿಸುತ್ತದೆ. ತಾಯಿ, ಛೀ! ಗುಟ್ಟಿದ ಆ ಕಳ್ಳಮರಿಯನ್ನು ಏಕಲವ್ಯ ಮುದ್ದಿಸುತ್ತಾನೆ. ಅಷ್ಟರಲ್ಲಿ ಆಚಾರ್ಯಾಗಮನವಾಗುವ ಕಾವಲ್ ಕಹಳೆ ಘೋಷಣೆಯನ್ನು ಕೇಳಿ ಪಾರ್ವರುಣಿಸನ್ನು, ಅಣಿಗೊಳಿಸುವಂತೆ ತಾಯಿಗೆ ಹೇಳಿ ಕಳುಹಿಸಿ ಗುರುಸ್ತೋತ್ರದಲ್ಲಿ ತಲ್ಲೀನನಾಗಿ ದ್ರೋಣಪ್ರತೀಕಕ್ಕೆ ದೀರ್ಘದಂಡ ಪ್ರಣಾಮ ಮಾಡುತ್ತಾನೆ.

ಗುರುದ್ರೋಣಾಚಾರ್ಯರು ತಮ್ಮ ವಚನರಕ್ಷಣೆಗಾಗಿ ಶಿಷ್ಯನೆಡೆಗೆ ಬರುತ್ತಾರೆ. ಅವರ ಮನಸ್ಸು ಹೊಯ್ದಾಟದಲ್ಲಿ ಸಿಕ್ಕಿರುತ್ತದೆ. ಅರ್ಜುನನಿಗೆ ಕೊಟ್ಟಿರುವ ವಚನ, ಮುಗ್ಧ ಶಿಷ್ಯನಿಗೆ ಮೋಸ ಮಾಡಲು ಒಲ್ಲದ ಮನಸ್ಸು, ಪಾಪಕಾರ್ಯ, ಇದಕ್ಕೆಲ್ಲಾ ಕಾರಣ ತನ್ನ ಅಹಂಕಾರವೇ ಕಾರಣವೆಂದು ಅರಿತು ತನ್ನನ್ನೇ ತಾನು ನಿಂದಿಸಿ-ಕೊಳ್ಳುವನು.

'ನನ್ನಹಂಕಾರದಾ ಛಲಮೆ ಮರಿಯಿಕದುದು
ಪ್ರಾರ್ಥನ ಅಹಂಕಾರದೀ ಕ್ರೂರ ಈರ್ಷ್ಯೆಯಂ'

ಒಬ್ಬನ ಅಹಂಕಾರವೇ ಮತ್ತೊಬ್ಬನ ಅಹಂಕಾರವಾಗಿ ಕರ್ಮ ಪರಂಪರೆ ಜನ್ಮ ಜನಾಂತರಗಳ ಬೆನ್ನು ಹತ್ತುತ್ತದೆ. ಅವನಿಗೆ ಮುಂದಾಗುವುದೆಲ್ಲ ಹೇಗೆ ಅರಿವಾಗಬೇಕು. ಅವನು ಎಲ್ಲರಂತೆ ವಿಧಿಯ ಕೈಯ ಕೂಸು, ಸಾಧನೆಯ ಫಲವಾಗಿ ಅವನು ಗುರುಪಟ್ಟಕ್ಕೆ ಯೋಗ್ಯನಾಗಿದ್ದರೂ ಅವನಿಗೆ ಪೂರ್ಣವಿದ್ಯಾಶಕ್ತಿಯ ಕೃಪೆ ಒದಗಿಲ್ಲ. ಬಾಳು ಸಾಗಿದಂತೆ ಅದು ಅವನಿಗೆ ಅರ್ಥವಾಗುತ್ತದೆ.

ಅರ್ಜುನನ ಮತ್ಸರಾಗ್ನಿಯನ್ನು ಸಂದಿಸುವುದಕ್ಕಾಗಿ ಏಕಲವ್ಯ ಹೆಬ್ಬೆರಳನ್ನು ಆಹುತಿಯಾಗಿ ತೆಗೆದುಕೊಂಡ ಚಿತ್ರ ಕೊನೆಯ 'ಯಜ್ಞ' ದೃಶ್ಯದಲ್ಲಿ ಮೂಡಿದೆ. ಏಕಲವ್ಯ ದ್ರೋಣನನ್ನು ಗುರುವೆಂದೊಲಿದು, ಲೋಕ ಗುರುವೆಂದು ಶ್ರದ್ಧಾಭಕ್ತಿಗಳಿಂದ ಪೂಜಿಸುವುದಕ್ಕೆ ಕೊಡುವ ಕಾಣಿಕೆ ಇದು. ಗುರು ಕಾಣಿಕೆಯನ್ನು ಸಲ್ಲಿಸುವುದರಲ್ಲಿ ತನ್ನ ಸಾಧನೆಗೆ ಸಾರ್ಥಕತೆಯನ್ನು ಕಾಣುತ್ತಾನೆ.

ಏಕಲವ್ಯನ ಹೆಬ್ಬೆರಳನ್ನು ಆಹುತಿ ತೆಗೆದುಕೊಳ್ಳದೆಯೇ ಅವನ ಮಹಿಮಾ-ಶಕ್ತಿಯನ್ನು ಕ್ಷಯಿಸುವುದು ಸಾಧ್ಯವೇ ಎಂದು ನಿರ್ಣಯಿಸಿ, ಪರೀಕ್ಷೆ ಮಾಡುವ ನೆಪದಿಂದ ಹಾಗೂ ಏಕಲವ್ಯನು ತನ್ನ ಬಿಲ್ವಿದ್ಯಾ ಪ್ರವೀಣತ್ವವನ್ನು ಪರೀಕ್ಷಿಸುವ ಸಲುವಾಗಿ ಗಗನ ಪಕ್ಷಿಯೊಂದನ್ನು ಗುರಿಯಿಟ್ಟು ಕೆಡುವುವಂತೆ ಶಿಷ್ಯನಿಗೆ ಆಜ್ಞೆ ಮಾಡುವನು. ಮುಗಿಲಾಚೆ ಇದ್ದ ಪಕ್ಷಿಯ ಕೊರಳುಲಿ ಸಂಯಮಿಯೂ ಸರ್ವ ಭೂತರಹಿತವೂ ಆದದ್ದು ಏಕಲವ್ಯನಿಗೆ ಕೇಳಿಸುತ್ತದೆ. ಆದರೆ ಪಾಪದ ಲೇಪನವಿಲ್ಲದ ಪಕ್ಷಿಯನ್ನು ಕೊಂದು ತನ್ನ ವಿದ್ಯೆಗೆ ಪಾಪವನ್ನು ಲೇಪಿಸಿಕೊಳ್ಳುವುದು ಅವನಿಗೆ ಇಷ್ಟವಾಗದೇ ಇದ್ದ ಶಿಷ್ಯನ ನಡತೆಯನ್ನು ಕಂಡು ಗುರುವು 'ಪುಣ್ಯವಂತನು ನೀನು ಏಕಲವ್ಯ ಬದುಕಿದೆಯ್, ನೀನ್ ಬದುಕಿ ನನ್ನನುಂ ಬದುಕಿಸಿದಯ್ ಎಂದು ಹೇಳುವನು.

ಗುರುದ್ರೋಣಾಚಾರ್ಯನು ಘೋರ ಸಂಕಟಕ್ಕೆ ಈಡಾಗಿರುವುದನ್ನು ಅರಿತ ಏಕಲವ್ಯ ಅದಕ್ಕೆ ಪರಿಹಾರವನ್ನು 'ಮನ್ನಧೀನಮಿರ್ಪೊಡೆ ಸಮರ್ಪಿಸುವೆನ್ನನ್ನ ಸರಸ್ವಮಂ ನಿನ್ನಡಿಗೆ ಗುರುದೇವಾ....' ಎಂದು ನಿಶ್ಚಲ ಮನಸ್ಸಿನಿಂದು ಉಸುರುತ್ತಾನೆ.

"ಇತ್ತ ಗುರುವಿಂಗೀವುದೇನ್
ತ್ಯಾಗಮೆ? ಪರಮ ಸಂಪದಮದುವೆ ಪುರುಷಾರ್ಥ
ಸಾಧನಂ! ನಿನ್ನಂದೆ ಕಲ್ತೆನಧ್ಯಾತ್ಮಮಂ

ಪಡೆವುದೆಲ್ಲಂ ಕೊಡುವುದಕ್ಕಲ್ತೆ, ಆರ್ಯ? ಮೇಣ್
ಪೂರ್ಣಮ ಕೊಡದೆ ಪಡೆದಪೆವಂತು ಪೂರ್ಣಮಂ?

ಎಂದು ಹೇಳುತ್ತಾ ಹಿಂದಿನ ರಾತ್ರಿ ತನಗಾದ ಕನಸಿನ ಅನುಭವವನ್ನು ನೆನೆದು-ಕೊಳ್ಳುತ್ತಾನೆ. ಕನಸಿನಲ್ಲಿ ಅವನ ಭವಿಷ್ಯದ ಸೂಚನೆಯ ಅರಿವಾಗಿದೆ. ದ್ರೋಣಾಚಾರ್ಯನು 'ಬಿಲ್ ಬಿಜ್ಜೆಗುಸಿರಪ್ಪ ಆ ಪೆರ್‌ಬೆರಳ್' ಅನ್ನು ಕೊಡು ಎಂದಾಗ ಶಿಷ್ಯನು

"…. ಸರ್ವಮಂ ನಿನಗಾಂಸಮರ್ಪಿಸಲ್
ಮನದಂದೇನೀ ಬೆರಳ್ ಅದೇನ್ ಕಿರಿದಲ್ತು
ಪೆರ್ ಬೆರಳ್ ತಾನಾದೊಡಂ!"

ಎಂದು ಸಂತೃಪ್ತನಾಗಿ ನುಡಿಯುತ್ತಾನೆ. ಗುರು ಕೇಳಿದ ಬಲಗೈ ಹೆಬ್ಬೆರಳನ್ನು ಕೊಡದೆ, ಕುಸಿಯದೆ, ಸುಮ್ಮಾನದಿಂದ

ಕೊಳ್ ದಕ್ಷಿಣೆಯನ್ ಇದನ್! ಗೆಲ್ಗೆ ಧರ್ಮಂ
ಗೆಲ್ಗೆ ದೈವೇಚ್ಛೆ! ನಿಮ್ಮ ವಚನಂ ನಿಲ್ಗೆ!

ಎಂದು ದ್ರೋಣ ಪ್ರತೀಕದ ಮಂದಣ ಹಾಸುಬಂಡೆಯ ಮೇಲೆ ಇಟ್ಟು ತನ್ನ ಎಡಗೈಯ ಬಾಣದಿಂದ ಕತ್ತರಿಸಿ ಆ ಬೆರಳ ರೂಪದಲ್ಲಿ ತನ್ನ ಸರ್ವಸ್ವವನ್ನು ನರರೂಪ ನಿಮಿತ್ತವಾದ ಲೋಕ ಗುರುವಿಗೆ ಸಮರ್ಪಿಸುತ್ತಾನೆ. ತನ್ನ ಬಾಳನ್ನು ಸಾರ್ಥಕ ಗೊಳಿಸುತ್ತಾನೆ. ಆತ್ಮತೃಪ್ತಿಯನ್ನು ಸವಿದು ಸುಖಿಸುತ್ತಾನೆ.

ರಕ್ತಸೋರುವ ಗಾಯಕ್ಕೆ ಮದ್ದಿಕ್ಕಲೆಂದು ಏಕಲವ್ಯ ಮರೆಯಾದ ಮೇಲೆ ದ್ರೋಣ ಮಡುಗಟ್ಟಿ ನಿಂತಿದ್ದ ರಕ್ತವನ್ನು ಬಾಗಿ ನೋಡುತ್ತಾನೆ. ಆ ರಕ್ತದಲ್ಲಿ ವಿಕೃತವಾದ ತನ್ನ ಮುಖ ಕಾಣಿಸುತ್ತದೆ. ಕೂಡಲೇ "ಖಡ್ಗ ಮುಷ್ಠಿಯ ಭೀಮಹಸ್ತವೊಂದೊಯ್ಯನೆರಗಿ ಕತ್ತರಿಸಿತಾ ತನ್ನ ಪಡಿನೆರಳಕೊರಳಂ! ಕೆಡೆದುರುಳ್ದುದು ಮಂಡೆ" ಆಗತಾನೇ ಬಂದ ಏಕಲವ್ಯನೊಡನೆ

ನಿನ್ನ ಬೆರಳ್‌ಗೆ
ಕೊಳ್ವದೊಂದೇ ತೋರ್ಪುದಾ ಬಿದಿ
ನನ್ನ ಕೊರಳಂ।

ಎಂದು ದ್ರೋಣನು ರಕ್ತದ ಮಡುವಿನಲ್ಲಿ ಕಂಡ ಅಪಶಕುನ ಬಗ್ಗೆ ಹೇಳುವನು. ಇದು ತನ್ನ ಭವಿಷ್ಯದ ಬಲಿ ಎಂದು ಹೇಳುವನು. ದ್ರೋಣನು ಶಿಷ್ಯನನ್ನು ಹರಸಿ ಆತನಿಂದ

ಬೀಳ್ಕೊಂಡು ಆ ಕಡೆ ತೆರಳಿದ ಮೇಲೆ, ಈ ಕಡೆ ತಾಯಿ ಬಂದು ತನ್ನ ಮಗನಿಗೆ ಒದಗಿದ ದುರವಸ್ಥೆಯನ್ನು ಕಂಡು ಕರುಳಿರಿಯುವ ಸಂಕಟದಿಂದ, ಕುಪಿತಳಾಗಿ;

ಆರ್ಗ್ಗೋ ಬಲಿ ನನ್ನ ಕಂದನ ಬೆರಳ್
ಬಲಿಯಕ್ಕೆ ಆ ಪಾಪಿಯ ಕೊರಳ್

ಎಂದು ಶಪಿಸುತ್ತಾಳೆ. ತನ್ನ ತಾಯಿಯ ಮಾತೃಶಾಪದ ಭೀಷಣ ಪರಿಣಾಮಕ್ಕೆ ಬೆದರಿದ ಏಕಲವ್ಯ

ಆಗಬಾರದುದಾಯ್ತೆ?
ಅಯ್ಯೋ, ನನ್ನ ತ್ಯಾಗಂ ವ್ಯರ್ಥವಾಯ್ತು;
ದುಡಿಕಿದವ್ ಅಬ್ಬೆ
ನನ್ನನುಂ ಕೊಳ್ಳದೆಯ ಬಿಡದು ನಿನ್ನೀ ಶಾಪಂ

ಎಂದು ಸುಯ್ದು ಕ್ಷೇಮಕಾತರನಾಗಿ ದ್ರೋಣ ಪ್ರತೀಕದ ಮುಂದೆ ಕುಳಿತುಕೊಂಡು ಉದ್ದಂಡ ನಮಸ್ಕಾರ ಮಾಡಿ ಪ್ರಾರ್ಥನೆಯನ್ನು ಮಾಡುವುದರೊಂದಿಗೆ ನಾಟಕ ಮುಗಿಯುತ್ತದೆ.

ಕೆ.ಜಿ.ನಾರಾಯಣಪ್ರಸಾದ್ ರವರು ಹೇಳುವಂತೆ, ಕೈಲಾಸಂರವರ ಉದ್ದೇಶ ನಾಟಕದ ತಾತ್ವಿಕ ಹಿನ್ನೆಲೆ ಹೀಗಿದೆ. " ಪ್ರತಿಯೊಂದು ಕೆಲಸಕ್ಕೂ ಒಂದು ಉಪಯೋಗ ಇರುವಂತೆಯೇ ಒಂದು ಉದ್ದೇಶವೂ ಇರುತ್ತದೆ. ಮನುಷ್ಯರಿಗೆ ಉಪಯೋಗ ಗೊತ್ತೆ ಹೊರತು ಉದ್ದೇಶ ಗೊತ್ತಿರುವುದಿಲ್ಲ. ಉಪಯೋಗವನ್ನೇ ಗುರಿಯಾಗಿ ಹೊಂದಿ ಸಾಗುತ್ತಾರೆ. ಅದರ ಉದ್ದೇಶ ವಿಧಿನಿಯಂತ್ರಿತವಾದುದಾಗಿರುತ್ತದೆ.[೧]

ದೇಜಗೌರವರು ಹೇಳುವಂತೆ ಶ್ರೀಮಾನ್ ಮಹಾಭಾರತದ ಹಳ್ಳತಿಟ್ಟುಗಳಿಂದ, ಭೀಮಭೀಷಣತೆಸ್ನಿಗ್ಧ ಮಾಧುರ್ಯಗಳ ಕಲಬೆರಕೆಯಿಂದ ಕೂಡಿರುವ ದೃಶ್ಯಗಳಿಂದ ನಾನಾ ವಿಧವಾದ ಗಿಡ, ಮರಬಳ್ಳಿ, ನದಿ, ಕೆರೆ, ಕೊಳ, ಪೊದೆ, ಪೊಟರೆಗಳಿಂದ ನಿಬಿಡವಾಗಿರುವ ದುರ್ಗಮ್ಯವಾದ ಗೊಂಡಾರಣ್ಯ ಅಲ್ಲಿಯ ಆದಿ ಪರ್ವದ ನೀರಸವಾದ ಏಕಲವ್ಯೋಪಾಖ್ಯಾನ-ಬೆರಳ್‌ಗೆ ಕೊರಳ್ ನಾಟಕದಲ್ಲಿ ರಸದ ಬುಗ್ಗೆಯಾಗಿ ಹಿಗ್ಗಿವೆ. ಶ್ರೀ ಕುವೆಂಪು ಅವರು ಅಲ್ಲಿಯೇ ಮೊರಡು ಕೊನೆಯೊಂದನ್ನು ಕಡಿದುತಂದು ತಮ್ಮ ಪ್ರತಿಭಾ ಶಕ್ತಿಯ ನೀರೆರೆದು, ಕಲ್ಪನೆಯ ಚೈತನ್ಯವನ್ನಿತು ವಿವೇಚನಾಶಕ್ತಿಯ ಸುತ್ತ ಬೇಲಿಯ ನಡುವೆ ಹೂ ಮಿಡಿಕಾಯ್ ಹಣ್ಣುಗಳಿಂದ ಇಡಿದ ರಮ್ಯವೂ

---

೧. ಕೆ.ಜಿ.ನಾರಾಯಣ ಪ್ರಸಾದ್, ಕುವೆಂಪು ಸಾಹಿತ್ಯಲೋಕ, ಸಂ. ಹ.ಕ.ರಾಜೇಗೌಡ, ಕುವೆಂಪು ಅಧ್ಯಯನ ಕೇಂದ್ರ, ರಾಜಾಜಿನಗರ, ಬೆಂಗಳೂರು, ೧೯೮೪, ಪುಟ. ೧೮೩

ಮನಮೋಹಕವೂ ಆದ ತರುವೊಂದನ್ನು ಬೆಳೆಸಿದ್ದಾರೆ. ಅದು ರಸಿಕರ ಕಲ್ಪತರು-ವಾಗಿದೆ.[೧]

**ಮಹಾಭಾರತದ ಮೂಲಕಥೆ:** ಏಕಲವ್ಯನು ಒಬ್ಬ ವ್ಯಾಧನ ಮಗ. ಇವನು ಬಿಲ್ವಿದ್ಯೆಯಲ್ಲಿ ಅಪಾರ ಆಸಕ್ತಿ ಹೊಂದಿದ್ದು, ಅದಕ್ಕಾಗಿ ಒಬ್ಬ ಗುರುವಿನ ಅವಶ್ಯಕತೆ ಇದ್ದು, ಅದಕ್ಕಾಗಿ ಹುಡುಕುತ್ತಾ ಹೊರಟನು. ದ್ರೋಣನ ಕೀರ್ತಿಯನ್ನು ಕೇಳಿ ಅವನಲ್ಲಿ ಶಿಷ್ಯನಾಗಿ ಬಿಲ್ವಿದ್ಯೆಯನ್ನು ಕಲಿಯಬೇಕೆಂದು ಭಿನ್ನವಿಸಿದನು. ದ್ರೋಣನು ವ್ಯಾದನ ಮಗ ಎಂಬ ಒಂದೇ ಕಾರಣದಿಂದ ಹಾಗೂ ಆಕಾಲದಲ್ಲಿ ಬಿಲ್ವಿದ್ಯೆ ಕೇವಲ ರಾಜಕುಮಾರರಿಗೆ ಮಾತ್ರ ಸೀಮಿತವಾಗಿದ್ದರಿಂದಾಗಿ ದ್ರೋಣಾಚಾರ್ಯರು ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಲಿಲ್ಲ. ಆದರೆ ಏಕಲವ್ಯ ನಿರಾಶನಾಗದೆ ಕಾಡಿಗೆ ಹೋಗಿ ಮಣ್ಣಿನಿಂದ ದ್ರೋಣನ ವಿಗ್ರಹವನ್ನು ನಿರ್ಮಿಸಿಕೊಂಡು ಆ ವಿಗ್ರಹದಲ್ಲಿ ದ್ರೋಣದ ಪ್ರತಿಬಿಂಬವನ್ನು ಕಂಡು ಅದಕ್ಕೆ ಗುರುಸೇವೆ ಸಲ್ಲಿಸುತ್ತಾ ಶಸ್ತ್ರಾಭ್ಯಾಸಕ್ಕೆ ತೊಡಗಿದನು. ಕೆಲವು ದಿನಗಳಲ್ಲಿಯೇ ಅವನು ಬಾಣ ಪ್ರಯೋಗದಲ್ಲಿ ಪಾರಂಗತನಾದನು.

ಒಮ್ಮೆ ಕೌರವರೂ ಪಾಂಡವರೂ ಬೇಟೆಗಾಗಿ ಕಾಡಿಗೆ ಬಂದರು. ಪಾಂಡವರ ಬೇಟೆಯ ನಾಯಿಯು ಏಕಲವ್ಯನನ್ನು ಕಂಡು ಬೊಗಳಿತು. ಅವನು ಅ ನಾಯಿಯ ಬಾಯೊಳಕ್ಕೆ ಒಟ್ಟಿಗೆ ಬಾಣಗಳನ್ನು ಹೂಡಿ ನಾಯಿಯು ಬಾಯಿ ತೆಗೆಯದ ಹಾಗೆ ತೂರಿಸಿದನು. ನಾಯಿ ಪಾಂಡವರ ಬಳಿ ಓಡಿ ಹೋಯಿತು. ಅದರ ಬಾಯಿಯೊಳಗೆ ಇದ್ದ ಬಾಣಗಳನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಅಂಥ ಕೈಚಳಕ ಉಳ್ಳವನು ಯಾರಿರಬಹುದೆಂದು ಹುಡುಕುತ್ತಾ ಬಂದು ಏಕಲವ್ಯನನ್ನು ಕಂಡರು. ಅವರು ಅವನನ್ನು ಪ್ರಶ್ನಿಸಿ ಅವನು ನಿಷಾದರಾಜನಾದ ಹಿರಣ್ಯಧನುಷನ ಮಗನೆಂದು, ದ್ರೋಣಾಚಾರ್ಯರ ಶಿಷ್ಯನೆಂದು ತಿಳಿದರು. ಧನುರ್ವಿದ್ಯೆಯಲ್ಲಿ ತನ್ನನ್ನು ಮೀರಿಸಿದ ಬೇರೊಬ್ಬ ವ್ಯಕ್ತಿಯಿದ್ದುದ್ದನ್ನು ನೋಡಿ ಅರ್ಜುನನು ವ್ಯಾಕುಲಭರಿತನಾದನು. ಊರಿಗೆ ಹೋದ ಮೇಲೆ ರಹಸ್ಯವಾಗಿ ದ್ರೋಣರನ್ನು ಬೇಟಿಯಾಗಿ "ಗುರುವೆ, ಧನುರ್ವಿದ್ಯೆಯಲ್ಲಿ ನನ್ನನ್ನು ಬೇರೆ ಯಾವ ಶಿಷ್ಯನು ಮೀರಿಸಲಾರರು" ಎಂದು ವಚನವನ್ನು ಕೊಟ್ಟಿದ್ದೀರಿ ಆದರೆ ಕಾಡಿನಲ್ಲಿ ನಿಮ್ಮ ಶಿಷ್ಯನೊಬ್ಬ ಇದ್ದಾನೆ. ಅವನು ವ್ಯಾಧ ಎಂದನು. ದ್ರೋಣ ಮರು ಮಾತನಾಡದೆ ಅರ್ಜುನನನ್ನು ಕೂಡಿಕೊಂಡು ಅರಣ್ಯಕ್ಕೆ ಹೋದನು. ಗುರುವನ್ನು ಕಂಡೊಡನೆಯೇ ಏಕಲವ್ಯನು ನಮಸ್ಕಾರ ಮಾಡಿ ಅವರ ನಾಮಸ್ಮರಣೆ-ಯಿಂದಲೇ ನಾನು ಅಸ್ತ್ರ ವಿದ್ಯೆಯಲ್ಲಿ ಪಾರಂಗತನಾದೆನೆಂದು ಹೇಳಿಕೊಂಡನು. ನೀನು ನನ್ನ ಶಿಷ್ಯನಾದರೆ, ಗುರುದಕ್ಷಿಣೆಯೆಲ್ಲಿ? ಎಂದು ಗುರು ಕೇಳಿದನು. ನನ್ನದು ಯಾವುದೂ

---

೧. ದಾರ್ಶನಿಕ ನಾಟಕ (ಬೆರಳ್‌ಗೆ ಕೊರಳ್‌೦ ದೇಜಗೌ-ಪುಸ್ತಕ ಹೆಸರು ಕುವೆಂಪು ನಾಟಕ ಸಮೀಕ್ಷೆ ಸಂ. ಮಳಲಿವಸಂತಕುಮಾರ್, ಪ್ರಕಾಶನ ಸುರುಚಿ, ೧೯೩೦

ಇಲ್ಲ ಸಮಸ್ತವೂ ತಮ್ಮದೆ, ತಾವು ಏನು ಕೊಡಬೇಕೆಂದು ಆಜ್ಞಾಪಿಸುವಿರೋ ಅದನ್ನು ಕೊಡುತ್ತೇನೆ ಎಂದು ಏಕಲವ್ಯ ಉತ್ತರಿಸಿದನು. ಹಾಗಾದರೆ ನಿನ್ನ ಬಲಗೈಯ ಹೆಬ್ಬೆರಳನ್ನು ಕೊಡು" ಎಂದನು ದ್ರೋಣ. ಏಕಲವ್ಯ ಹಿಂದೆ ಮುಂದೆ ಯೋಚಿಸದೇ ವ್ಯಾಕುಲಗೊಳ್ಳದೆ, ಕೂಡಲೇ ತನ್ನ ಹೆಬ್ಬೆರಳನ್ನು ಕತ್ತರಿಸಿ ಕೊಟ್ಟನು. ಇದರಿಂದ ಅರ್ಜುನನಿಗೆ ಸಂತೋಷವಾಯಿತು. ದ್ರೋಣನು ಕೊಟ್ಟ ಮಾತು ಉಳಿಯಿತು.

**ಬೆರಳ್‌ಗೆ ಕೊರಳ್ ನಾಟಕದಲ್ಲಿ ಕಂಡು ಬರುವ ಬದಲಾವಣೆಗಳು**

ಬೆರಳ್‌ಗೆ ಕೊರಳ್ ನಾಟಕದಲ್ಲಿ ಕುವೆಂಪುರವರು ನಾಟಕದ ಮೊದಲನೆಯ ದೃಶ್ಯವನ್ನು ಗುರುನಾಮಸ್ಮರಣೆಯ ಪ್ರಾರ್ಥನೆಯಿಂದಲೇ ಪ್ರಾರಂಭಿಸಿದ್ದಾರೆ. ಏಕಲವ್ಯನು ದ್ರೋಣರ ಆಗಮನವನ್ನು ಪ್ರಕೃತಿಯ ಚರಾಚರ ವಸ್ತುಗಳೊಂದಿಗೆ ತಿಳಿಸಿ, ಹರ್ಷಿಸುವ ಸನ್ನಿವೇಶವಿದೆ.

ಕುವೆಂಪು ನಾಟಕದ ಬಹುಮುಖ್ಯ ಬದಲಾವಣೆಯೆಂದರೆ ಅದು ಏಕಲವ್ಯನ ತಾಯಿಯ ಪಾತ್ರ ಸೃಷ್ಟಿ, ಇದು ಪ್ರಧಾನ ಪಾತ್ರವಾಗಿದ್ದು, ನಾಟಕದ ಪ್ರಾರಂಭದಿಂದ ಅಂತ್ಯದವರೆಗೆ ಬಹಳ ಎಚ್ಚರಿಕೆಯಿಂದ ಬೆಳೆಸಿದ್ದಾರೆ. ಪ್ರಾರಂಭದ ದೃಶ್ಯದಲ್ಲಿ ಏಕಲವ್ಯ ಹಾಗು ಆತನ ತಾಯಿಯ ನಡುವೆ ಸಂಭಾಷಣೆ ಇದ್ದು, ಇದು ಏಕಲವ್ಯನ ಪರಿಸರ, ಕಾಡಿನ ಬಗೆಗೆ, ವನ್ಯ ಪ್ರಾಣಿಗಳ ಬಗೆಗಿನ ಕಾಳಜಿಯ ಬಗ್ಗೆ, ಆತನ ತಾಯಿಗೆ ಏಕಲವ್ಯನ ಮೇಲಿರುವ ಪ್ರೀತಿಯ ಬಗ್ಗೆ ತಿಳಿಯುತ್ತದೆ. ಅದೇ ರೀತಿ ಏಕಲವ್ಯನ ಬಿಲ್ವಿದ್ಯೆ, ದ್ರೋಣರ ಪ್ರತಿಮೆ, ದೇವರೆಂದು ಆತನು ಶ್ರದ್ಧಾಭಕ್ತಿಗಳಿಂದ ಪೂಜಿಸುವ ಕ್ರಮ ಇವುಗಳಿಂದಾಗಿ ಗುರು ದ್ರೋಣಾಚಾರ್ಯನ ಬಗ್ಗೆ ಅವನ ಬಗ್ಗೆ ಏಕಲವ್ಯನಾಗಿರುವ ಗುರುಭಕ್ತಿ ಅರ್ಪಣಾ ಮನೋಭಾವಗಳನ್ನು ಕುವೆಂಪು ಏಕಲವ್ಯನ ತಾಯಿಯ ಪಾತ್ರದಿಂದ ತಿಳಿಸಿದ್ದಾರೆ.

ಈ ನಾಟಕದ ಮೂರು ದೃಶ್ಯಗಳನ್ನು ಕುವೆಂಪುರವರು ಗುರು, ಕರ್ಮ,ಯಜ್ಞ ತತ್ವಗಳು ಎಂಬ ಮೂರು ವಿಧವಾಗಿ ವಿವರಿಸಿ ಅವನ್ನು ಏಕಲವ್ಯನ ಜೀವನದಲ್ಲಿ ಅಳವಡಿಸಿದ್ದಾರೆ. ಈ ಕ್ರಮದಲ್ಲಿ ಏಕಲವ್ಯನು ಕ್ರಮವಾಗಿ ಬಿಲ್ ವಿದ್ಯೆಯನ್ನು ಪಡೆದದ್ದು, ಇದರಿಂದಾಗಿ ದ್ರೋಣನು ಪಡುವ ವಿಧಿಯ ವಚನ ಸಂಕಟ ಹಾಗೂ ಕೊನೆಯದಾಗಿ ತಾನು ಎಲ್ಲಿಂದ ಬಿಲ್ವಿದ್ಯೆಯನ್ನು ಪಡೆದನೋ ಅಲ್ಲಿಯೇ ಅದು ಪರಿಸಮಾಪ್ತಿಯಾಗುವುದನ್ನು ಮೇಲಿನ ಈ ಮೂರು ತತ್ವಗಳ ಆಧಾರದಲ್ಲೇ ನಿರೂಪಿಸಿದ್ದಾರೆ.

ಇದೇ ರೀತಿ ನಾಟಕದ ಕೊನೆಯಲ್ಲಿ ದ್ರೋಣಾಚಾರ್ಯನು ಏಕಲವ್ಯನ ಹೆಬ್ಬೆರಳನ್ನು ಪಡೆದು ಸತ್ಕಾರಗೊಂಡು ಹೊರಟುಹೋದಾಗ, ಅಲ್ಲಿಗೆ ಬಂದ ಏಕಲವ್ಯನ

ತಾಯಿಯು ಏಕಲವ್ಯನ ಹೆಬ್ಬೆರಳು ಬಲಿಯಾಗಿರುವುದನ್ನು ಕಂಡು, ಕರುಳಿದು ತನ್ನ ಮಗನ ಬೆರಳಿಗೆ, ಆ ಗುರುವಿನ ಕೊರಳ್ ಬಲಿಯಾಗಲೆಂದು ಶಪಿಸುವಳು. ಇದು ಈ ನಾಟಕದಲ್ಲಿ ತಾಯಿಯ ರೂಪದಲ್ಲಿ ಕುವೆಂಪು ಸಾಮಾಜಿಕ ದಬ್ಬಾಳಿಕೆಗೆ ಒಳಗಾದ ಏಕಲವ್ಯನಿಗೆ ಪ್ರತೀಕಾರ ರೂಪದಲ್ಲಿ ನ್ಯಾಯವನ್ನು ಒದಗಿಸಿದ್ದಾರೆ.

**ಬದಲಾವಣೆಯ ಪ್ರಸಂಗಗಳು:** ಬೆರಳ್‌ಗೆ ಕೊರಳ್ ನಾಟಕದಲ್ಲಿ ಪ್ರಧಾನವಾಗಿ ಕಂಡುಬರುವ ಬದಲಾವಣೆಯೆಂದರೆ ಏಕಲವ್ಯನ ತಾಯಿ ಪಾತ್ರ. ಇದು ಕುವೆಂಪುರವರ ಹೊಸ ಸೃಷ್ಟಿ. ಮೂಲಕಥೆಯನ್ನು ಯಥಾವತ್ತಾಗಿ ಕಾಪಾಡಿಕೊಂಡು ಬಂದಿರುವ ಕುವೆಂಪುರವರು ಆತನ ತಾಯಿಯ ಪಾತ್ರವನ್ನು ಹೊಸದಾಗಿ ಸೇರಿಸಿ ನಾಟಕ ಆರಂಭದಿಂದ ಅಂತ್ಯದವರೆಗೆ ಎಚ್ಚರಿಕೆಯಿಂದ ಬೆಳೆಸಿಕೊಂಡು ಬಂದು ಆ ಮೂಲಕ ಏಕಲವ್ಯ ಹಾಗೂ ದ್ರೋಣಾಚಾರ್ಯರ ನಡುವೆ ಪ್ರತೀಕಾರದ ಸಾಮಾಜಿಕ ನ್ಯಾಯದ ಸೇತುವೆಯಾಗಿ ನಿಲ್ಲಿಸಿದ್ದಾರೆ, ಅದೇ ರೀತಿ ನಾಟಕ ಪ್ರಾರಂಭದಲ್ಲಿ ಪಾತ್ರವನ್ನು ಏಕಲವ್ಯ ದೈನಂದಿನ ಜೀವನ, ಪ್ರಕೃತಿಯ ವ್ಯಾಪಾರ, ಆತನ ಬಿಲ್ವಿದ್ಯೆ, ಗುರುಭಕ್ತಿಯನ್ನು ಈ ತಾಯಿಯ ಪಾತ್ರದೊಂದಿಗೆ ಸಂವಾದಿಸಿದ್ದಾರೆ.

ಏಕಲವ್ಯ ಹಾಗೂ ಆತನ ತಾಯಿಯ ಪಾತ್ರದಲ್ಲಿ ಕಂಡುಬರುವ ಅಂಶಗಳೆಂದರೆ ಏಕಲವ್ಯನಿಗೆ ಕಾಡಿನ ಬಗ್ಗೆ, ಕಾಡಿನ ಪ್ರಾಣಿಗಳ ರಕ್ಷಣೆ, ಲಾಲನೆ-ಪಾಲನೆಯಲ್ಲಿ ಗುರುವಿನಲ್ಲಿ ಅವನಿಗಿರುವ ಸದ್ಭಾವನೆಗಳು ಕಂಡುಬರುತ್ತವೆ.

ಗುರುದ್ರೋಣಾಚಾರ್ಯರು ಏಕಲವ್ಯನ ಅರಣ್ಯ ರಾಜ್ಯಕ್ಕೆ ಬರುವುದನ್ನು ತಿಳಿದು ಪ್ರಕೃತಿಯೊಂದಿಗೆ ಅವನ ಸಂವಾದವು ಸಚೇತನವಾಗಿದೆ.

ಈಸು ದಿನ ಬದುಕಿದುದಕೀ ಸುದಿನಮನ್ ಕಂಡೆನ್
ಇಂದು ಗುರುವೈತಪ್ಪನೆನ್ನೀ ವನಸ್ಥಲಕೆ
ಪವಿತ್ರತರಮಪ್ಪುದೀ ಕಾಡುಮಲೆ ದಿಲ್ ದಿಟಂ
ಪೂಜ್ಯಗುರುಪದದೂಳಿಯಂ!

ಎಂದು ತನ್ನ ಗುರುವಿನಾಗಮನವು ತನಗೆ ಹಾಗೂ ತನ್ನ ಕಾಡಿಗೆ ಪವಿತ್ರವನ್ನು ಉಂಟುಮಾಡುತ್ತದೆ ಎಂಬ ಭಾವನೆ ಇದೆ.

ಗುರುಬರ್ಪುದೆನ್ನೀವನಸ್ಥಲಕೆ।
ಕಣ್ ತೆರೆ ಓ ನಿಮೀಲಿತಾ ಉಷಾಲಲಿತೆ
ದಿಟಮ್ ಇಂದು ಗುರುಬರ್ಪನೆನ್ನೀ ವನಸ್ಥಲಕೆ।
ಕಂದರದೊಳೆಲೆಯುತಿಹ ಮಂಜು ಮೋಡಂ
ಅಲರಿಮ್ ಎಲೆಸರ್ಸೆ ಸೋದದರಿರಾ

ಎಂದು ಪ್ರಕೃತಿಯ ಅಣುರಚನೆಗಳಿಗೆ ತನ್ನ ಗುರುವಿನಾಗಮವನ್ನು ಹಂಚಿಕೊಳ್ಳುವುದನ್ನು ಕುವೆಂಪು ತಮ್ಮ ಪ್ರಕೃತಿ ಪ್ರತಿಭೆಯಲ್ಲೇ ತೋರಿಸಿದ್ದಾರೆ.

ತಾಯಿಯ ಮಾತುಗಳ ಮೂಲಕ ಏಕಲವ್ಯನ ವ್ಯಕ್ತಿತ್ವ ಸಮಗ್ರವಾಗಿ ಪರಿಚಯವಾಗುತ್ತದೆ. ಅವ್ವೆ ಏಕಲವ್ಯ ಪೂಜಿಸಿದ್ದ ದ್ರೋಣ ಪ್ರತೀಕವನ್ನು ಕಂಡು

ಇದೇನ್ ಗೊಂಬೆಯಾಟವೋ ನನ್ನಣುಗಂಗೆ
ಈ ಅಡವಿಯೊಳೆಲ್ಲಿ ನೋಡಿದೊಡಲ್ಲಿ
ಇವನ ಈ ಗೊಂಬೆಗಳ್!
ಹುಂ! ಅಣುಗನಲ್ತೆ, ಆಡಲಿ!
ಪಿಂತಿಲ್ಲ, ಮುಂತಿಲ್ಲ, ಬೆನ್ನಿಲ್ಲ, ಬಸಿರಿಲ್ಲ
ಒರ್ವೆ ನೊಂಟಿಗನಲ್ತೆ, ಬೇಸರ್ ಕಳೆವುದೆಂತು
ಮಿಗಗಳ್, ಪಕ್ಕಿಗಳ್, ಮರಗಳ್, ಕಲ್ಗಳ್
ತಿಂಗಳ್, ನೇಸರ್, ಉದಯಾಸ್ತಂಗಳ್
ತೊರೆಗಳ್
ಮೇಣಿಂತಪ್ಪ ನೀರ್ ಬೀಳಗಳ್
ಇವೆ ಅಲ್ತೆ ಬಡವುಟ್ಟುಗಳ ಮೇಣ್ ಒಡನಾಡಿಗಳ್

ತಾಯಿಗೆ ದ್ರೋಣನ ಪ್ರತಿಮೆಗಳು ಗೊಂಬೆಗಳಂತೆ ಕಂಡರೂ, ಏಕಲವ್ಯನಿಗೆ ಅದು ಗುರುವೇ. ಅವನ ಗುರುಭಕ್ತಿ, ಕಾಡಿನ ಪ್ರಾಣಿಪಕ್ಷಿ, ಮೃಗ, ಮರ, ತಿಂಗಳು, ನೇಸರ, ತೊರೆ, ನೀರು, ಇವೇ ಅವನ ಒಡಹುಟ್ಟುಗಳು.

ಕುವೆಂಪುರವರು ಮಾಡಿರುವ ಪ್ರಮುಖ ಬದಲಾವಣೆಯೆಂದರೆ ದ್ರೋಣನು ಏಕಲವ್ಯನನ್ನು ಶಿಷ್ಯನನ್ನಾಗಿ ಸ್ವೀಕರಿಸುವುದು. ಈ ನಾಟಕದ ಮುಖ್ಯ ಬದಲಾವಣೆ. ಮೂಲಕಥೆಯಲ್ಲಿ ಗುರುದ್ರೋಣಾಚಾರ್ಯ ಏಕಲವ್ಯನನ್ನು ವ್ಯಾಧನ ಮಗನೆಂದು ತಿರಸ್ಕರಿಸಿದರೆ ಇಲ್ಲಿ ಸ್ವೀಕರಿಸುತ್ತಾರೆ. ಏಕಲವ್ಯ ಮತ್ತು ಆತನ ಅಬ್ಬೆಯ ಸಂವಾದವು ಅವರಿಬ್ಬರ ವಾತ್ಸಲ್ಯ ಶಕ್ತಿಗೆ ಹಿಡಿದ ಕನ್ನಡಿಯಾಗಿದೆ.

ಅಬ್ಬೆ, ಅಬ್ಬೆ
ನನ್ನ ಬರ್ದುಕೆಲ್ಲಮಂ ನೀನೆ ತುಂಬಿರ್ಪೆಯಯ್
ನೀನ್ ಎರ್ದೆಯ ತುಂಬಿರಲ್ ಬಾಳ್ ತುಂಬುವುದು ನನಗೆ
ಇಲ್ಲದಿರೆ ಬರಿದಪ್ಪ ಬಾಳ ಗೋಳ್ ಬರಿಯಗೊಳ್!

ಇದರಿಂದಾಗಿ ಏಕಲವ್ಯನಿಗೆ ಆತನ ತಾಯಿಯೇ ಉಸಿರು, ಆಕೆಯ ಮಮತೆಯ ಮಡಿಲಲ್ಲಿ ಆತ ಬೆಳೆದಿದ್ದಾನೆ, ಆಕೆಯೇ ಆತನಿಗೆ ದಕ್ಕಿದ ಏಕಮಾತ್ರ ಮನುಷ್ಯ ಸಂಬಂಧವಾಗಿದೆ.

ಏಕಲವ್ಯನು ತಾನು ಗಳಿಸಿದ ಬಿಲ್ವಿದ್ಯಾ ಪರಿಣಿತಿಯನ್ನು ತನ್ನ ತಾಯಿಗೆ ತಿಳಿಸುತ್ತಾನೆ. ಅದು ಅವನ ಮಾತುಗಳಲ್ಲಿ ಸ್ಪಷ್ಟವಾಗುತ್ತದೆ.

ಏಕಲವ್ಯ: ಗುರುಕೃಪೆಯಿಂದಾ ಬಿಜ್ಜೆ ಕರತಲಾಮಲಕಂ
ಪುಲಿಯೋ, ಸಿಂಹವೋ? ಫಣಿಯೊ? ಪೇರಾನೆಯೋ?
ಬಳಿಯೊ? ಗೆಂಟರೊ? ಕಾಣ್ಗೆ ಮೇಣ್ ಕಾಣದಿರ್ಕೆ
ಕಣ್‌ಬೊಲದೊಳಿರ್ಕೆ ಮೇಣ್ ಪೊರಗಿರ್ಕೆ
ಹೆದೆಯನೇರಿಸಿ ಬಿಲ್ಲೆ ಬಾಣಮಂ ಪೂಡಿ
ನೆನದು ಗುರುದೇವನಂ ಬಿಟ್ಟೆನೆನೆ
ತಪ್ಪದೆಂದರಿ ನಾನಿಟ್ಟ ಗುರಿ!

ಏಕಲವ್ಯನು ಬಿಲ್ವಿದ್ಯೆ ಕಲಿಯಲು ದ್ರೋಣರ ಬಳಿ ತೆರಳುವಾಗ ಆತನ ತಂದೆ

"ಆವರ್ ಪಾರ್ವತ್
ಬಿಯದರ್ಗೆ ಬವಜುಗೆಯ್ಯಲ್ಕೆ ಒಪ್ಪರ್

ನಿನ್ನನ್ನು ಗನಗಹಿಸಿ ನಕ್ಕು ನೂಂಕುವರ್ ಎಂದು ಹೇಳುವನು ಇದು ಅಂದಿನ ಸಾಮಾಜಿಕ ಹೊಣೆಯನ್ನು ತೋರಿಸಿದ್ದಾರೆ. ಆದರೂ ತಂದೆಯ ಒಪ್ಪಿಗೆಯನ್ನು ಪಡೆದು ದ್ರೋಣನ ಬಳಿಗೆ ತೆರಳುವನು. ಕುವೆಂಪುರವರು ಮಾಡಿರುವ ಮತ್ತೊಂದು ಬದಲಾವಣೆಯೆಂದರೆ ದ್ರೋಣ ಮತ್ತು ಅಶ್ವತ್ಥಾಮನನ್ನು ಮೂಲಕ್ಕಿಂತ ಬೇರೆಯಾಗಿ ಚಿತ್ರಿಸಿದ್ದಾರೆ.

ದ್ರೋಣಾಚಾರ್ಯರು ಏಕಲವ್ಯನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ ನಂತರ, ಅರಸು ಮಕ್ಕಳ ಅಸೂಯೆ ಅಡ್ಡ ಬಂದು, ಪಾಂಡವರಲ್ಲಿ ಒಬ್ಬನಾದ ಅರ್ಜುನನು ಬಿಂಕದಿಂದ ಮೆರೆದು, ಕರುಬಿ, ಶೂದ್ರನೊಡನೆ ಸಮಚರ್ಯೆ ಸಲ್ಲದೆಂದು ಮುನಿಸಿದನು. ಆದರೂ ಏಕಲವ್ಯನ ಬಿಲ್ವಿದ್ಯೆಯು ಪಾಂಡವರಿಗಾಗಿ ಮೀಸಲಾಗಿರುತ್ತದೆಂದು ಹೇಳಿದರೂ ಕೇಳದೇ ಏಕಲವ್ಯನನ್ನು ಹೊರಗಟ್ಟುತ್ತಾರೆ. ಆದರೂ ದ್ರೋಣನು ಏಕಲವ್ಯನನ್ನು ಸಂತೈಸಿ ಬಚ್ಚನೆಂದಿದ್ದ ಹೆಸರನ್ನು ಏಕಲವ್ಯ ಎಂದು ಬದಲಿಸಿದನು.

ಆಸೆಗಡದಿರ್ ನೀ ನಮ್ಮ ಮನೆಯಾಳಾಳಾದಿರು
ಈ ಗರುಡಿಗೆನ್ನ ಸೇವೆಗೈತರುವೆ

ದೂರದಿಂ ಕಂಡುಕಲಿ, ಕಲ್ತನಿತಂ
ಮತ್ತುಳಿದುದಂ ಮನೆಯೊಳೆಯೆ ಕಲಿಯುವನಿತಂ
ಕಲಿಪೆನಶ್ವತ್ಥಾಮನೊಡನೆ"

ಎಂದು ಹೇಳಿ ತನ್ನ ಮನೆಯಲ್ಲೇ ಆಶ್ರಯ ನೀಡಿ ವಿದ್ಯೆಯನ್ನು ಕಲಿಸುವನು. ಇಲ್ಲಿ ಏಕಲವ್ಯನಿಗೆ ದ್ರೋಣನ ಪೂರ್ಣ ಆಶೀರ್ವಾದವಿದೆ. ಮೂಲದಲ್ಲಿ ಶಿಷ್ಯತ್ವವನ್ನು ದ್ರೋಣ ನಿರಾಕರಿಸಿದರೆ ಇಲ್ಲಿ ಕುವೆಂಪು ಸ್ವೀಕರಿಸುವಂತೆ ಮಾಡಿದ್ದಾರೆ.

ಅದೇ ರೀತಿ ಏಕಲವ್ಯನ ತಂದೆಯ ಅಕಾಲಿಕ ಮರಣದಿಂದಾಗಿ ಅವನು ಆಶ್ರಯಿಸಿದ ದ್ರೋಣನನ್ನು ಅನಿವಾರ್ಯವಾಗಿ ತೊರೆದು, ಕಾಡಿಗೆ ಹೋಗಬೇಕಾದ ಪರಿಸ್ಥಿತಿಯನ್ನು, ಅಲ್ಲಿ ದ್ರೋಣ ಪ್ರತಿಮೆಯನ್ನು ಸ್ಥಾಪಿಸಿ, ಪೂಜಿಸಿ, ಬಿಲ್ವಿದ್ಯೆಯ ಸಾಧನೆಯನ್ನು ಮಾಡುವುದನ್ನು ಕುವೆಂಪುರವರ ಮೂಲಕ್ಕಿಂತ ವಿಶೇಷವಾಗಿ ಚಿತ್ರಿಸಿದ್ದಾರೆ. ಆ ಮೂಲಕ ವಿದ್ಯೆ ಎಂಬುದು ಮೇಲ್ವರ್ಗದವರಿಗೆ ಸೀಮಿತ ಶೂದ್ರರು ಅದನ್ನು ಜೀರ್ಣಿಸಿಕೊಳ್ಳಲು ಬರುವ ಅಡ್ಡಿಆತಂಕಗಳನ್ನು ಈ ಮೂಲಕ ಚಿತ್ರಿಸಿದ್ದಾರೆ.

ಇದೇ ರೀತಿ ಅರ್ಜುನ ಮತ್ತು ಏಕಲವ್ಯರ ಬೇಟಿಯ ಸನ್ನಿವೇಶವೂ ಕೂಡಾ ಮಹತ್ವ ಪೂರ್ಣವಾದದ್ದು. ಏಕಲವ್ಯನು ಕಾಡಿನ ಪ್ರಾಣಿಗಳನ್ನು ರಕ್ಷಿಸುವವನು, 'ಮೊಟ್ಟೆಯಂ ತಿನಲೆಂದು ಬಂದಿರ್ದ ಪಾವೊಡನೆ ಬಲ್‌ಗಾಳೆ ಗಂಗೊಡುತ್ತಿರ್ದುದಂ ಕಂಡೆನಾ ನವಿಲನ್ ಸರಳೆಚ್ಚು ಫಣಿಯನಾಯಡೆಯೆ ಕೊಂದು ನವಿಲಬ್ಬೆಯಂ ಸಂತಯ್ಸಿ ರಕ್ಷೆಯನ್ನಿತ್ತು', ಎಂಬ ಮಾತಲ್ಲಿ ಅವನ ಪ್ರಾಣಿಗಳ ಪಾಲಕ ರಕ್ಷಕನೆಂಬ ಅರಿವಾಗುತ್ತದೆ. ಇಂತಹ ವನ ಅರಣ್ಯ ರಾಜ್ಯಕ್ಕೆ ಅರ್ಜುನನು ಬೇಟೆಗೆಂದು ಬಂದು ಅವರಿಬ್ಬರ ನಡುವೆ ನಡೆಯುವ ಸಂಭಾಷಣೆಯು ವನಚರ ಹಗೂ ನಾಗರೀಕ ಸಂಸ್ಕೃತಿಯನ್ನು ಬಿಂಬಿಸುತ್ತದೆ.

ಅರ್ಜುನ – ಏನಚರ, ಆರ್. ಎಚ್ಚರೀ ವರಾಹಮನ್
ಏಕಲವ್ಯ – ನಾಗರಿಕ ಓದಿ ತಿಳಿ; ಕಲಿಮುದಾ ಬಾಣಾಕ್ಷರಂ
ಅರ್ಜುನ – ಆರೋ, ನೀನ್
ಏಕಲವ್ಯ – ನೀನೆ ಸಂಬೋಧಿಸದವೊಲ್ ವನಚರನ್

ಈ ರೀತಿ ಅರ್ಜುನ ಸಂಸ್ಕೃತಿ ಏಕಲವ್ಯ ಸಂಸ್ಕೃತಿಯನ್ನು ಕುವೆಂಪುರವರು ಮೇಳೈಸಿರುವ ದೊಡ್ಡ ಬದಲಾವಣೆ.

ಅರ್ಜುನ – ನೀನೆಚ್ಚುದೆಂತೊ ಬಿಯದ?
ನಾನಿಲ್ಲಗೈತಂದ ವೇಳೆಯೊಳ್
ನೀನೆಲ್ಲಿಯಂ ಕಣ್ಬೊಲದೊಳಿರ್ದುದಿಲ್ಲ
ಹೂಂಕಾರಮಂ ಕೇಳ್ದು ಗುರಿಯೆಚ್ಚಯೋ?

ಏಕಲವ್ಯ – ದಿಟವೊರೆದೆಯಯ್

ಅರ್ಜುನ – ನಿನಗೆಂತೊ ತಿಳಿದುದಾ ಬಿಲ್ ಜಾಣ್ಮೆ?
ಓವೋ! ನೀನ್ ಬಿಲ್ ಜಾಣನ್
ಶಬ್ದವೇಧಿ ವಿದ್ಯೆ ನಿನಗೆ ಅಂಗಯ್ ನೆಲ್ಲಿಯಲ್ತೆ?

ಏಕಲವ್ಯ – ನೀಂ ದಲ್ ಸತ್ಯವಾಕ್ ಕಾಣಾ
ಕರತಲಾಮಲಕಮಾ ಬಿಜ್ಜೆ ನನಗೆ

ಅರ್ಜುನ – ಪುಸಿಯದಿರ್ ಕಾಡ।
ಜಗತ್ರಯದೊಳೊರ್ವ ನಿರ್ಪನ್
ಅವನರಿವನಾ ವಿದ್ಯೆಯಂ

ಏಕಲವ್ಯ – ನನಗರಿಯದಾ ಸರ್ವಜ್ಞತೆಯ ಪರೆ
ಆದೊಡಂ ನೀನ್ ಪೇಳ್ದುದದು ನನ್ನಿಯಪ್ಪೊಡೆ
ನಿನ್ನಿದಿರೆ ನಿಂದಿರ್ಪನಾ ನೀನ್ ಬಣ್ಣಿಪಾತನ್

ಎಂದು ಈ ಎರಡೂ ಸಂಸ್ಕೃತಿಯ ನಡುವೆ ಶಬ್ದವೇದಿ ವಿದ್ಯೆಯ ಬಗ್ಗೆ ವಾಗ್ವಾದವನ್ನು ಕುವೆಂಪು ಮೂಲಕ್ಕಿಂತ ವಿಸ್ತಾರವಾಗಿ ನೀಡಿದ್ದಾರೆ.

ಕುವೆಂಪುರವರು ಅರ್ಜುನ ಮತ್ತು ಏಕಲವ್ಯರ ವಾಗ್ವಾದದಲ್ಲಿ ಏಕಲವ್ಯನು ಅಜುನನನ್ನು

ಅಣ್ಣ ಓದಿದನ್
ಓದುವುದೆ ಪೂಜೆಯಪ್ಪುದು ನಿನಗೆ
ಪುಣ್ಯಮಂಪೊತ್ತು ತಂದಪ್ಪುದಾ ಪೆಸರ್

ಎಂದು ಸಂಬೋಧಿಸುತ್ತಾನೆ ಕಾರಣ ಅರ್ಜುನ ಎಷ್ಟೇಯಾದರೂ ದ್ರೋಣನ ಮೊದಲ ಶಿಷ್ಯ.

ದ್ರೋಣಾಚಾರ್ಯನು ಏಕಲವ್ಯನ ಹೆಬ್ಬೆರಳನ್ನು ಪಡೆಯಲು ಒಲ್ಲದ ಮನಸ್ಸಿನಿಂದ ಅಸಮಾಧಾನದಿಂದ ಬರುವನು. ಇದು ಕುವೆಂಪು ದ್ರೋಣ ಪಾತ್ರದಲ್ಲಿ ಮಾಡಿರುವ ಹೊಯ್ದಾಟದ ಬದಲಾವಣೆ.

ದ್ರೋಣನು ಅರ್ಜುನನ ಅಪೇಕ್ಷೆಯಂತೆ ಏಕಲವ್ಯನ ಶಕ್ತಿಯನ್ನು ಹತ್ತಿಕ್ಕಲು ಬರುವಾಗ

ಎನಿತು ತಣ್ಣೆರ್ಪುದೀ ಅಡವಿಯೆರ್ದೆಯೊಳ್
ಕಾಡಾದೊಡಂ ನೂರುಮಡಿ ಲೇಸು
ಕರುಬು ಕಿಚ್ಚುರಿವ ಆ ನಮ್ಮ ನಾಡಿಗಿಂ.

ಇದು ಅವರು ಅರಸು ಮಕ್ಕಳ ಬಗೆಗಿನ ಅಸಮಾಧಾನ ಸೂಚಕವಾಗಿದೆ.

ಕುವೆಂಪು ಸೃಷ್ಟಿಸಿರುವ ದ್ರೋಣನಿಗೆ ಆತ್ಮ ವಿಶ್ಲೇಷಣೆಯ ಶಕ್ತಿ ಪಶ್ಚಾತ್ತಾಪದ ಶಕ್ತಿ ಇದೆ.

ಅರಸು ಮಕ್ಕಳ್ಗೊವಜುಗೆಯ್ವುದುಂ ಮೇಣ್
ಸಿಡಿಮದ್ದನರೆವುದುಂ ಎರಡು ಮೊಂದೆ!
ಸೋಲ್ತುದೆನ್ನೀ ಜೀವವಮಾಕೌರವರ ಪಾಂಡವರ,
ದಾಯಾದಿ ಮಚ್ಚರದ ಬೇಗೆಯೊಳ್ ಬೆಂದು,
ಈ ಅಹಂಕಾರಮೆಯೆ ಮೂಲಮನಿತರ್ಕಂ
ಅಲ್ಲದಿರೆ ನಾನೇತಕಾ ಅರ್ಜುನಗೆ ಗುರುವಾಗಿ
ದ್ರುಪದನಂ ಗೆಲ್ದು ತಂದೆನಾಡಿಗೆ ಕಡೆವವೊಲ್
ಮಾಡಿ ನನ್ನೆರ್ದೆಯ ಬಿಂಕದ ದೆವ್ವಕೆಡೆಯಿತ್ತು
ಸವ್ಯಸಾಚಿಯ ಹಂಗಿಗೊಳಗಾಗುತಿರ್ದೆನ್?

ಎಂದು ತನ್ನ ಪೂರ್ವಕರ್ಮವನ್ನು ಅವಲೋಕಿಸುತ್ತಾ ಮರುಗುವನು.

ದ್ರೋಣಾಚಾರ್ಯರು ಪರಿಸ್ಥಿತಿಯ ಒತ್ತಡಕ್ಕೆ ಮಣಿದು ತಾನು ಮಾಡುತ್ತಿರುವ ಅನ್ಯಾಯದ ಸ್ಪಷ್ಟ ಅರಿವನ್ನು ಹೊಂದಿರುತ್ತಾರೆ.

ನಾನುಮಾ ಕೆಸರೊಳಳ್ದುವೆನಲ್ತೆ ಇಂದು।
ಮಾತೃ ಸೇವೆಯೊಳಿರ್ಪನ್
ತಂದೆ ಇಲ್ಲದ ತಬ್ಬಲಿ
ಆ ಕಾಡ ಬೇಡರ ಹುಡುಗನನ್ ಬೆರಳ್ ಕೊಯ್ದು
ಆ ರಕ್ತಪಂಕದೊಳಿವನ ಕೀರ್ತಿ ಪಂಕೇಜಮಂ
ಮರೆಯವೇಳ್ಕಂತೆ!

ಎಂಬ ಭಾವನೆ ಇದ್ದರೂ ತಾವು ಕೊಟ್ಟ ವಚನದ ಈಡೇರಿಕೆಗಾಗಿ ಅನಿವಾರ್ಯವಾಗಿ ಏಕಲವ್ಯನ ಬಳಿ ಬರುತ್ತಾರೆ. ಇದೇ ವೇಳೆಗೆ ಏಕಲವ್ಯನಿಗೆ ಅಮಂಗಲದ ಕನಸು ಬೀಳುತ್ತದೆ. ಕ್ರೂರ ವಿಧಿಯು, ಎರಡೂ ಕೈಯಲ್ಲಿ ಸರ್ಪದ ಬಾಹುವನ್ನು ಹೊಂದಿ ಇವನ ಕೊರಳನ್ನು ಕೊಡು! ಎಂದು ಕೇಳಿದಾಗ ಏಕಲವ್ಯನು ಸಂತೋಷದಿಂದ ನನ್ನ ಕೊರಳೇನು? ದೇಹವನ್ನೇ ಸಮರ್ಪಿಸಿಕೋ? ಎಂದು ಸಮರ್ಪಿಸುತ್ತಾನೆ.

ದ್ರೋಣನು ಪರೀಕ್ಷಿಸುವ ಸಂದರ್ಭದಲ್ಲಿ ಏಕಲವ್ಯನನ್ನು ಪೊಂಗುಳಿಯೆಂಬ ಹಕ್ಕಿ ಆಕಾಶದಲ್ಲಿ ಕಂಡು ಮರೆಯಾಗುತ್ತದೆ. ಆದರೆ ಅದರ ಕೂಗಿನ ಶಬ್ದ ಕೇಳಿಸುತ್ತಿರುತ್ತದೆ. ಶಬ್ದವೇಧಿ ವಿದ್ಯೆಯ ಸಹಾಯದಿಂದ ಹಕ್ಕಿಯನ್ನು ಹೊಡೆಯಲು ಹೇಳುತ್ತಾನೆ. ಆಗ ಏಕಲವ್ಯನು ಪಾಪದ ಲೇಪವಿಲ್ಲದ ಹಕ್ಕಿಯನ್ನು ಕೊಂದು ನನ್ನ ಬಿಲ್ವಿದ್ಯೆಗೆ ಹೇಗೆ ಪಾಪವನ್ನು ಲೇಪಿಕೊಳ್ಳಲಿ? ಎಂದು ಗುರುವಿಗೆ ತಿಳಿಸುವನು. ಇದು ಏಕಲವ್ಯನ ವ್ಯಕ್ತಿತ್ವವನ್ನು ಬಿಂಬಿಸುವುದರಲ್ಲಿ ಕುವೆಂಪುರವರ ಸಾರ್ಥಕ ಪ್ರಯತ್ನವಾಗಿದೆ. ಇಲ್ಲಿ ಏಕಲವ್ಯ ದ್ರೋಣರು ತಪ್ಪು ಮಾಡುವ ತಂತ್ರವನ್ನು ಹೂಡಿದರೂ ಈ ಪರೀಕ್ಷೆಯಲ್ಲಿ ಗೆದ್ದು ಗುರುವಿಗೆ ಆದರ್ಶನಾಗುತ್ತಾನೆ.

ನಾಟಕದ ಅತಿಮುಖ್ಯ ಕೇಂದ್ರ ಪಾತ್ರವೆಂದರೆ ಏಕಲವ್ಯನ ಅಬ್ಬೆಯ ಪ್ರತೀಕಾರದ ಪ್ರಸಂಗ. ಏಕಲವ್ಯನು ಸಮರ್ಪಣಾ ಮನೋಭಾವದಿಂದ ತನ್ನ ಗುರು ಕೇಳಿದ ಹೆಬ್ಬೆರಳನ್ನು

ಕೊಳ್ ದಕ್ಷಿಣೆಯನ್ ಇದನ್। ಗೆಲ್ಗೆ ಧರ್ಮಂ
ಗೆಲ್ಗೆ ದೈವೇಚ್ಚೇ। ನಿಮ್ಮ ವಚನಂನಿಲ್ಗೆ ।

ಎಂದು ಹೇಳಿ ದ್ರೋಣನ ಮುಂದಿನ ಹಾಸುಗಲ್ಲಿನ ಬಂಡೆಯ ಮೇಲೆ ಇಟ್ಟು ಎಡಗೈಯ ಬಾಣದಿಂದ ಕತ್ತರಿಸಿ ತನ್ನ ಹೆಬ್ಬೆರಳನ್ನು ಸಮರ್ಪಿಸುವನು. ದ್ರೋಣನು ರಕ್ತದ ಮಡುವಿನಲ್ಲಿ ತನ್ನ ವಿಕೃತ ಮುಖವನ್ನು ನೋಡುತ್ತಾನೆ. "ಖಡ್ಗ ಮುಷ್ಟಿಯ ಭೀಮ ಹಸ್ತಮೊಂದೊಯ್ಯನೆರಗಿ ಕತ್ತರಿಸಿತಾ ತನ್ನ ಪಡಿನೆಳಲ ಕೊರಳಂ। ಕೆಡೆದುರುಳ್ಗದು ಮಂಡೆ" ಪ್ರತಿಬಿಂಬವು ಕಾಣಿಸುತ್ತದೆ. ನಂತರ ಶಿಷ್ಯನಿಂದ ಬೀಳ್ಕೊಂಡು ದ್ರೋಣನು ತೆರಳುತ್ತಾನೆ. ಅಬ್ಬೆಯ ಆಗಮನವಾಗಿ ತನ್ನ ಮಗನ ಹೆಬ್ಬೆರಳ ಬಲಿ ವಿಷಯ ತಿಳಿದು ಕರುಳಿರಿದು

ಆರ್ಗೋ ಬಲಿ ನನ್ನ ಕಂದನ ಬೆರಳ್
ಬಲಿಯಕ್ಕೆ ಆ ಪಾಪಿಯ ಕೊರಳ್!

ಎಂದು ದ್ರೋಣಾಚಾರ್ಯನಿಗೆ ಶಾಪವನ್ನು ನೀಡಿ, ಮಗನಿಗೆ ಆದ ಪ್ರತೀಕಾರಕ್ಕೆ ಸಾಮಾಜಿಕ ಅನ್ಯಾಯಕ್ಕೆ ಕೊರಳನ್ನು ಬೇಡುವಳು. ಇದು ಕುವೆಂಪುರವರ ಸಾಮಾಜಿಕ ಬದಲಾವಣೆಯ ಮುಖ. ದಬ್ಬಾಳಿಕೆಗೆ ಒಳಗಾದ ಅಬ್ಬೆಯು ಪ್ರತೀಕಾರವಾಗಿ ದ್ರೋಣನ ಕೊರಳನ್ನು ಅಪೇಕ್ಷಿಸುತ್ತಾಳೆ.

ಒಟ್ಟಿನಲ್ಲಿ ಬೆರಳ್‌ಗೆ ಕೊರಳ್ ನಾಟಕವು ಸಾಮಾಜಿಕ ಅಸಮಾನತೆ, ವರ್ಣ-ಬೇಧತೆ, ಅಧಿಕಾರಸ್ಥರ ದಬ್ಬಾಳಿಕೆ, ದುರ್ಬಲರ ಬಲಿದಾನ ಮುಂತಾದ ಹಿಂದಿನ ಭಾರತೀಯ ಸಮಾಜದಲ್ಲಿ ಬೇರುಬಿಟ್ಟಿದ್ದ ದೌರ್ಬಲ್ಯಗಳನ್ನು ತಿದ್ದುವ ಪ್ರಯತ್ನವನ್ನು

ಮಾಡಿದ್ದಾರೆ. ಈ ಪ್ರಯತ್ನದಲ್ಲಿ ಶೋಷಿತರಾಗಿ ಸಾಮಾಜಿಕ ನ್ಯಾಯವನ್ನು, ಆದರ್ಶ ಪಾತ್ರಗಳಲ್ಲಿ ಅಂಟಿದ್ದ ಕೊಳೆಯನ್ನು ತೊಳೆದು ಅವರನ್ನು ಮತ್ತಷ್ಟು ಆದರ್ಶನೀಯ-ರನ್ನಾಗಿಸಿದ್ದಾರೆ.

ಕುವೆಂಪುರವರು ಪುರಾಣಪಾತ್ರಗಳಲ್ಲಿ ಶ್ರೀರಾಮನಿಗೆ ಅಂಟಿದ್ದು ಅಪವಾದವನ್ನು ಹೋಗಲಾಡಿಸಿದಂತೆ, ದ್ರೋಣರ ಪಾತ್ರವನ್ನು ಉದಾತ್ತೀಕರಿಸಿ ಆ ಮೂಲಕ ಮೂಲದ ದ್ರೋಣನನ್ನು ಅಳಿಸಿ ಹೊಸ ದ್ರೋಣಾಚಾರ್ಯರನ್ನಾಗಿ, ಆದರ್ಶ ದ್ರೋಣಚಾರ್ಯ ರನ್ನಾಗಿಸಿದ್ದಾರೆ. ಈ ಪಾತ್ರ ಚಿತ್ರಣಗಳಲ್ಲಿ ಕುವೆಂಪುರವರಲ್ಲಿ ಸುಪ್ತವಾಗಿರುವ ಮನುಜಮತ, ವಿಶ್ವಪಥ, ವಿಶ್ವಭ್ರಾತೃತ್ವ, ಅನಿಕೇತನ ಸಿದ್ಧಾಂತಗಳು ತತ್ವಗಳನ್ನು ಗುರುತಿಸಬಹುದು.

ಸಮಾಜದ ಸಾಮಾಜಿಕ ಕ್ರಾಂತಿಯ ಹರಿಕಾರರಾಗಿ ಕುವೆಂಪು ಏಕಲವ್ಯನ ಹೆಬ್ಬೆರಳಿಗೆ ಗುರುವಿನ ಕೊರಳನ್ನು ಬೇಡುವ, ತಾಯಿಯ ಪಾತ್ರ ಸೃಷ್ಟಿಸಿ ಸಾಮಾಜಿಕ ದಬ್ಬಾಳಿಕೆಗೆ ಒಳಗಾದ, ಶೋಷಿತ ಧ್ವನಿಯಾಗಿ, ಪ್ರತಿಭಟಿಸಿ ತನಗೆ ಒದಗಿದ ಅನ್ಯಾಯಕ್ಕಾಗಿ ಕೊರಳನ್ನು ಕೇಳುವ ಮೂಲಕ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಟ್ಟಿದ್ದಾರೆ.

ಇಲ್ಲಿ ಕುವೆಂಪು ಶತಶತಮಾನಗಳಿಂದ ಸಮಾಜದ ಮೇಲ್ವರ್ಗ, ಅಧಿಕಾರಸ್ತರ ದಬ್ಬಾಳಿಕೆಗೆ ಒಳಗಾಗುತ್ತಲೇ ಬಂದಿದ್ದ ಮೂಕರಾದ ಕೆಳಸ್ತರದವರಿಗೆ ಧ್ವನಿಯಾಗಿದ್ದಾರೆ. ಇಲ್ಲಿ ಇವರ ಸಾಮಾಜಿಕ ನ್ಯಾಯಧಾತರಾಗಿ ಆ ವರ್ಗದ ರಕ್ಷಕರಾಗಿದ್ದಾರೆ.

ಈ ನಾಟಕದ ಕೊನೆಯಲ್ಲಿ ಏಕಲವ್ಯನ ಹೆಬ್ಬೆರಳು ಗುರುದಕ್ಷಿಣೆ ರೂಪದಲ್ಲಿ ಬಲಿಯಾದಾಗ ಒಬ್ಬ ಮನಃಶಾಸ್ತ್ರಜ್ಞನಾಗಿ ಕುವೆಂಪು ಏಕಲವ್ಯನ ತಾಯಿಯ ರೋಧನ, ಸಂಕಟ, ಅವಳ ಪ್ರತೀಕಾರ, ಸಿಟ್ಟುಗಳನ್ನು ಮನಗಂಡು ಅವಳ ನೊಂದ ಮನಸ್ಸಿಗೆ ಶಾಂತರೂಪವನ್ನು ನೀಡಲು ಕೊರಳನ್ನು ಬೇಡುವಂತೆ ಮಾಡಿದ್ದಾರೆ.

### ಚಂದ್ರಹಾಸ

ಕುಂತಳ ನಗರದ ಬೀದಿಯಲ್ಲಿ ಅನಾಥನಾಗಿರುವ ಚಂದ್ರಹಾಸನ ರಕ್ಷಣೆಗೆ ಭಕ್ತಿದೇವಿ, ಪ್ರಾರ್ಥನಾದೇವಿ, ಕೃಪಾದೇವಿ ಈ ಮೂವರು ಸಿದ್ದರಾಗಿ ಬರುವುದರೊಂದಿಗೆ ನಾಟಕ ಆರಂಭವಾಗುತ್ತದೆ. 'ಚಂದ್ರಹಾಸ ಕಥೆ ರಸಪಾಕವಾದರೆ, ಅದಕ್ಕೆ ಬೆರಸಿದ ದಿವ್ಯ ಪರಿಮಳವೇ ಭಕ್ತಿದೇವಿ, ಪ್ರಾರ್ಥನಾದೇವಿ, ಕೃಪಾದೇವಿಯರ ರಮ್ಯಸೃಷ್ಟಿ' (ಜೀ.ಸಂ.ಪರಮಶಿವಯ್ಯ, ಕುವೆಂಪು ಕವಿಕೃತಿ ವಿಮರ್ಶೆಯಲ್ಲಿ ಹೇಳುತ್ತಾರೆ). ಭಕ್ತಿದೇವಿ ಲೋಕನಾಕಗಳ ಸಂಬಂಧವನ್ನು ಬೆಸೆಯಲು ಹವಣಿಸುವಳು. ಪ್ರಾರ್ಥನಾ-ದೇವಿ ಪ್ರೇಮಿಯಡೆಯಿಂದ ಉದಿಸಿ ಭಗವಂತನಡಿಯರಸಿ ಹಾರಿದರೆ, ಕೃಪಾದೇವಿ

ಭಗವಂತನಡಿಯಿಂದ ಪೃಥ್ವಿಗವತರಿಸಿ ಬರುತ್ತಾಳೆ. ಈ ಚಂದ್ರಹಾಸ ನಾಟಕವನ್ನು ಕುರಿತು ಕೆ.ವೆಂಕಟರಾಮಪ್ಪನವರು ಹೇಳುವಂತೆ 'ದಕ್ಷಿಣ ಸ್ಲೊವಾಕಿಯಾದ ಅನೇಕ ಕಥೆಗಳಲ್ಲಿ ಚಂದ್ರಹಾಸನ ಕಥೆಯ ಮಾದರಿಯನ್ನು ಕಾಣಬಹುದು' ಎಂದಿದ್ದಾರೆ. (ಸಂಭಾವನೆ, ಪುಟ. ೨೪೧) ರಾಜಬೀದಿಯಲ್ಲಿ ದುಷ್ಟಬುದ್ಧಿ ತನ್ನ ಮಕ್ಕಳು ಮತ್ತುಗಾಲವನೊಡಗೂಡಿ ಹೋಗುತ್ತಿರುವಾಗ ಆಟವಾಡುತ್ತಿದ್ದ ಬಾಲಕರ ಗುಂಪಿನಲ್ಲಿದ್ದ ಒಬ್ಬ ತೇಜಸ್ವಿ ಹುಡುಗ ರಾಜಪುರೋಹಿತನ ಗಮನ ಸೆಳೆಯುತ್ತಾನೆ. ಗಾಲವನು ಆತನಲ್ಲಿರುವ ರಾಜಕಳೆಯನ್ನು ಗಮನಿಸಿ 'ಈ ಬಾಲಕನು ಮುಂದೆ ರಾಜ್ಯದ ರಾಜನಾಗುವನು' ಎಂದು ಭವಿಷ್ಯವನ್ನು ನುಡಿದನು. ಈ ಮಾತು ದುಷ್ಟಬುದ್ಧಿಗೆ ಚಿಂತಾಕ್ರಾಂತನಾಗುವಂತೆ ಮಾಡಿತು.

ದುಷ್ಟಬುದ್ಧಿಯ ಭೀಷಣನೆಂಬ ಚಂಡಾಲನನ್ನು ಕರೆದು ಚಂದ್ರಹಾಸನನ್ನು ಕೊಲ್ಲುವಂತೆ ಆಜ್ಞೆ ಮಾಡುತ್ತಾನೆ. ಅದರಂತೆ ಮಾರ, ಕಾಳ, ಭೀಷಣರು ಚಂದ್ರಹಾಸನನ್ನು ಅಜ್ಜಿಯ ಗುಡಿಸಲಿನಿಂದ ಅಪಹರಿಸಿ, ದಟ್ಟ ಕಾನನಕ್ಕೆ ಎಳೆದು ತರುವರು. ಕೊಲ್ಲುವುದಕ್ಕೆ ವಿಪುಲ ಯತ್ನವ ನಡೆಸಿ, ವಿಫಲರಾಗಿ ಚಂದ್ರಹಾಸನ ಕಾಲಿನಲ್ಲಿದ್ದ ಆರನೆಯ ಬೆರಳನ್ನು ಗಮನಿಸಿ, ಈ ಬೆರಳು ನಮ್ಮನ್ನೂ, ಅವನನ್ನೂ, ಉಳಿಸುತ್ತದೆಂದು ನಿರ್ಣಯಿಸಿ, ಆ ಆರನೆಯ ಬೆರಳನ್ನು ಕತ್ತರಿಸಿ ಅವನನ್ನು ಹತ್ಯೆ ಮಾಡಿದ್ದೇವೆಂದು ತಮ್ಮ ಮಂತ್ರಿಯನ್ನು ನಂಬಿಸಲು ಕುರುಹಾಗಿ ತೆಗೆದುಕೊಂಡು ಒಬ್ಬರಿಂದೊಬ್ಬರು ಓಡಿಹೋಗುವರು.

ಈ ಸಮಯದಲ್ಲಿ ಕುಳಿಂದಕನೆಂಬ ರಾಜನು ಕಾಡಿಗೆ ಬೇಟೆಗೆಂದು ಬಂದು ಹರಿನಾಮವನ್ನು ಜಪಿಸುತ್ತಿರುವ ಚಂದ್ರಹಾಸನನ್ನು ಕಂಡು ಚಂದನಾವತಿಯ ರಾಜ್ಯಕ್ಕೆ ಕರೆದೊಯ್ದು ಆತನನ್ನು ಅರಮನೆಯಲ್ಲಿ ಮೇಧಾವಿನಿಯು ಸಲುಹಿದಳು. ಚಂದ್ರಹಾಸನ ರಾಜ್ಯ ಪ್ರವೇಶದಿಂದ ಚಂದನಾವತಿಯ ದಾರಿದ್ರ್ಯ ಕರಗಿಹೋಗಿ ಎಲ್ಲೆಲ್ಲೂ ಸುಭಿಕ್ಷೆ ನೆಲೆಸುತ್ತದೆ.

ಕುಳಿಂದಕನು ತನ್ನ ದೂತರನ್ನು ಕುಂತಳದ ದುಷ್ಟಬುದ್ದಿಗೆ ಚಂದ್ರಹಾಸನನ್ನು ಮಗನನ್ನಾಗಿ ಸ್ವೀಕರಿಸಿದ ವಿಷಯವನ್ನು ತಿಳಿಸಲು ಕಳುಹಿಸುವನು. ಎಲ್ಲವನ್ನು ಅರಿತ ದುಷ್ಟಬುದ್ಧಿಯು, ಚಂದ್ರಹಾಸನ ಕೊಲೆಯಲ್ಲಿ ಚಂಡಾಳರು ಎಸಗಿದ ವಂಚನೆಯನ್ನು ತಿಳಿದು, ರಾಜಕಾರ್ಯ ನಿಮಿತ್ತವೆಂದು ಕಾರಣವನ್ನು ಹೇಳಿ, ಚಂದ್ರಹಾಸನನ್ನು ನೋಡಲೆಂದು, ತನ್ನ ಮಗನಾದ ಮದನನಿಗೆ ರಾಜ್ಯದ ಚುಕ್ಕಾಣಿಯನ್ನು ಕೊಟ್ಟು, ಚಂದನಾವತಿಗೆ ತೆರಳುವನು. ಅಲ್ಲಿನ ಅರಸ ಕುಳಿಂದಕನಿಂದ ಸತ್ಕಾರಗೊಂಡು, ಚಂದ್ರಹಾಸನನ್ನು ಎದಿರುಗೊಂಡು, ಮತ್ತೊಮ್ಮೆ ಅವನ ಕೊಲೆಗೆ ಸಂಚುರೂಪಿಸುವನು.

ಅಂದು ಗಾಲವನು ನುಡಿದ ನುಡಿ ಸುಳ್ಳಾಗದು ಎಂದು ಅರಿತು, ತನ್ನ ಮಗನಿಗೆ ಸಿಂಹಾಸನವು ಕೈತಪ್ಪುವುದೆಂದು ಅರಿತು, ಚಂದ್ರಹಾಸನಿಗೆ ವಿಷಉಣ್ಣಿಸುವ ಕಾರ್ಯವನ್ನು ಮಾಡಲು ಸಂಚು ಹೂಡುವನು. ಅದಕ್ಕಾಗಿ ಕುಳಿಂದಕನು ಚಂದ್ರಹಾಸನನ್ನು ದತ್ತುಪುತ್ರನಾಗಿ ಸೇವಿಸಲು, ಕುಂತಳೇಂದ್ರನ ಒಪ್ಪುಗೆಯು ಅಗತ್ಯವೆಂದು, ಈ ರಾಜಕಾರ್ಯ ಸಾಧನೆಗೆ ತನ್ನ ಮಗನಿಗೆ ತಾನು ಬರೆದುಕೊಡುವ ಪತ್ರವನ್ನು ಚಂದ್ರಹಾಸನೇ ತಲುಪಿಸುವಂತೆ ಮಾಡುವನು. ಅದರಂತೆ ಪತ್ರವನ್ನು ಬರೆಯುವನು.

"ಶ್ರೀಮತ್ ಸಚಿವ ಶಿರೋಮಣಿ ದುಷ್ಟಬುದ್ಧಿ
ಸುಪ್ರೇಮದಿಂ ತನ್ನ ಮಗ ಮದನಂಗೆ ಮಿಗೆ ಪರಸಿ
ನೇಮಿಸಿದ ಕಾರ್ಯಮ್
ಈ ಚಂದ್ರಹಾಸಂ ಮಹಾಹಿತನೆಮಗೆ
ಮೇಲೆ ನಮ್ಮ ಸೀಮೆಗರಸಾದಪಂ;
ಸಂದೇಹಮಿಲ್ಲದಕೆ. ಸಾಮಾನ್ಯದವನಲ್ಲ;
ನಮಗೆ ಮುಂದಕೆ ಸರ್ವಥಾಮಿತ್ರನಾಗುವನ್
ಎಂದೀತನಂ ಕಳುಹಿದೆವು ನಿನ್ನ ಬಳಿಗೆ
ಇದನರಿವುದು! ಹೊತ್ತುಗಳೆಯದೆ
ಬಂದ ಬಳಿಕಿವನ ಕುಲಶೀಲ ವಿತ್ತ ವಿದ್ಯಾ
ವಯೋ ವಿಕ್ರಮಂಗಳ ನೀಕ್ಷಿಸುತ್ತಿರದೆ
ವಿಷವ ಮೋಹಿಸುವಂತೆ ಕುಡುವುದೀತಂಗೆ ನೀನ್!
ಇವರೊಳೆಮಗೆ ಉತ್ತರೋತ್ತರಮಪ್ಪುದು
ಆಂ ಬೇಗ ಚಂದನಾವತಿಯಿಂದ ರಾಜಕಾರ್ಯವ ಮುಗಿಸಿ
ಬರ್ಪೆನ್. ಎನ್ನಚಿತ್ತಮಂ ನೀನರಿತು
ಹಿಂಜರಿಯದೆಲ್ಲಮಂ ಪೂರೈಸು ಯುಕ್ತಿಯಿಂದ!"

ಎಂದು ಪತ್ರವನ್ನು ಬರೆದು ಚಂದ್ರಹಾಸನ ಕೈಗಿಟ್ಟು ಮದನನಿಗೆ ತಲುಪಿಸುವಂತೆ ಆಜ್ಞಾಪಿಸುವನು.

ದುಷ್ಟಬುದ್ಧಿಯ ಪತ್ರವನ್ನು ತಂದು ಮಾರ್ಗಮಧ್ಯದಲ್ಲಿ ಆಯಾಸ ಪರಿಹಾರಕ್ಕಾಗಿ ಚಂದ್ರಹಾಸನು, ಕುಂತಳನಗರದ ಉದ್ಯಾನದಲ್ಲಿ ವಿಶ್ರಮಿಸಿದನು. ಇದೇ ಸಮಯಕ್ಕೆ ಉದ್ಯಾನದಲ್ಲಿ ದುಷ್ಟಬುದ್ಧಿಯ ಮಗಳು ವಿಷಯೆ, ತನ್ನ ಗೆಳತಿಯರೊಡನೆ ವಿಹಾರಕ್ಕಾಗಿ ಬಂದು, ಮುಂಬರಿದು ಮಲಗಿರುವ ಚಂದ್ರಹಾಸನನ್ನು, ಅವನ ರಾಜಸೌಂದರ್ಯಕ್ಕೆ ಮಾರುಹೋಗಿ ಮೂಕವಿಸ್ಮಿತಳಾಗಿ ನಿಂತು ನಾಚಿಕೆಯಿಂದ ನೋಡುವಳು. ಅವನ

ಸೊಂಟದಲ್ಲಿದ್ದ ಓಲೆಯನ್ನು ಗಮನಿಸಿ ಆ ಪತ್ರದಲ್ಲಿದ್ದ ಸಾರಾಂಶವನ್ನು ಓದಿದಳು. ನಂತರ ಭಯಗೊಂಡು, ಇಂತಹ ಸುಂದರಾಂಗನಿಗೆ ವಿಷವನ್ನು ಮೋಹಿಸುವುದು ಸಾಧುವಲ್ಲವೆಂದು ಬಗೆದು, ಹಾಗೂ ತನ್ನ ತಂದೆಯು ಅಣ್ಣನಿಗೆ ಬರೆದ ಪತ್ರವೇ ತಪ್ಪು ಬರಹದಿಂದ ಕೂಡಿರುವುದೆಂದು ಭಾವಿಸಿ ತನ್ನ ಕಿರುಬೆರಳಿನ ಉಗುರಿನಿಂದ ವಿಷವ ಮೋಹಿಸುವಂತೆ ಎಂಬುದನ್ನು ವಿಷಯೆ ಮೋಹಿಸುವಂತೆ ಮಾಡುವುದು ಎಂಬುದಾಗಿ ತಿದ್ದಿ ಯಥಾಸ್ಥಿತಿಯಲ್ಲೇ ಪತ್ರವನ್ನು ಚಂದ್ರಹಾಸನ ಸೊಂಟಕ್ಕೆ ಸಿಕ್ಕಿಸಿ ತೆರಳುವಳು.

ಚಂದ್ರಹಾಸನಿಂದ ಪತ್ರವನ್ನು ಪಡೆದ ಮದನನು, ತನ್ನ ತಂಗಿಯಾದ ವಿಷಯೆಯನ್ನು ಚಂದ್ರಹಾಸನಿಗೆ ಕೊಟ್ಟು ವಿವಾಹ ಮಾಡುವನು. ದುಷ್ಟಬುದ್ಧಿ ತನ್ನ ರಾಜ್ಯಕ್ಕೆ ಹಿಂದುರುಗಿ, ತನ್ನ ಮಗ ಮದನನು ಎಸಗಿದ ಕಾರ್ಯದಿಂದ ಕೋಪೋದ್ರಿಕ್ತನಾಗಿ, ಅವನನ್ನು ನಿಂದಿಸಿ, ಪತ್ರವನ್ನು ನೋಡಿ ಅದರಲ್ಲಿ ಉಂಟಾದ ದೋಷವನ್ನು ಗ್ರಹಿಸಿ, ಚಂದ್ರಹಾಸನನ್ನು ಕೊಲ್ಲುವ ಮತ್ತೊಂದು ಯೋಜನೆಯ ಮಾಡಿ, ಅದರಂತೆ ಊರ ಹೊರಗಿನ ಚಂಡಿಕಾಲಯಕ್ಕೆ ಕಳುಹಿಸಿ, ಚಂಡಾಲರಿಂದ ಕೊಲ್ಲುವ ಯೋಜನೆಯನ್ನು ಸಿದ್ದಪಡಿಸುತ್ತಾನೆ. ಭೀಷಣ, ಮಾರ, ಕಾಳ ಚಂಡಾಲರಿಗೆ ಈ ಕಾರ್ಯವನ್ನು ವಹಿಸುತ್ತಾನೆ. ಚಂದ್ರಹಾಸನ ಬಳಿ ಬಂದು, ತಮ್ಮ ಮನೆಯ ಸಂಪ್ರದಾಯದಂತೆ ಮನೆಯ ಅಳಿಯನು ಊರ ಹೊರಗಿರುವ ಕಾಳಿಕಾ ದೇವಾಲಯಕ್ಕೆ ರಾತ್ರಿಯಲ್ಲಿ ಒಬ್ಬನೇ ತೆರಳಿ ಪೂಜೆ ಸಲ್ಲಿಸುವಂತಹ ಪದ್ಧತಿಯಿದೆ ಎಂದು ತಿಳಿಸಿ ಅದಕ್ಕಾಗಿ ಅಣಿಗೊಳಿಸುವನು.

ಈ ವೇಳೆಗಾಗಲೇ ಮದನನಿಗೆ ಕುಂತಳೇಂದ್ರನಿಂದ ಕರೆಯು ಬಂದು ಆ ಕರೆಯ ಜೊತೆಗೆ ಚಂದ್ರಹಾಸನನ್ನು ತರುವಂತೆ ಆಜ್ಞೆ ಆಗಿರುತ್ತದೆ. ಕಾರಣವೆಂದರೆ, ಕುಂತಳೇಂದ್ರನು ರಾಜ್ಯಭಾರವನ್ನು, ಚಂದ್ರಹಾಸನಿಗೆ ವಹಿಸಿ ತಾನು ಶ್ರೀಹರಿಯನ್ನು ಧ್ಯಾನಿಸಲು ಬನಕೆ ಹೊರಡುವಂತಹ ಪರಿಸ್ಥಿತಿಯಲ್ಲಿದ್ದು, ಅದಕ್ಕಾಗಿ ಚಂದ್ರಹಾಸನನ್ನು ಕಾಣಲಿದ್ದನು. ಈ ಆಜ್ಞಾಪಾಲಕನಾಗಿ ಬಂದ ಮದನನು, ಚಂಡಿಕಾರಾಧನೆಯನ್ನು ನಾನೇ ಮಾಡುವೆನೆಂದು ತಿಳಿಸಿ, ಚಂದ್ರಹಾಸನನ್ನು ಕುಂತಳೇಂದ್ರನ ಬಳಿಗೆ ಕಳುಹಿಸಿ ತಾನೇ ಚಂಡಿಕಾಲಯಕ್ಕೆ ತೆರಳಿ, ತನ್ನ ತಂದೆ ತೋಡಿದ ಹಳ್ಳಕ್ಕೆ ತಾನೇ ಬಿದ್ದು ಚಂಡಾಲರ ಭದ್ರಮುಷ್ಠಿಯ ಪ್ರಹಾರಕ್ಕೆ ಒಳಗಾಗಿ ಪ್ರಜ್ಞಾಹೀನನಾಗಿ ರಕ್ತದೋಕುಳಿಯಲ್ಲಿ ಬಿದ್ದನು. ಕಾಳನು ಇವರು ಮದನ ಒಡೆಯರೆಂದು ಗುರುತಿಸುವನು.

ಮದನ ಸತ್ತ ವಿಷಯ ತಿಳಿದ ದುಷ್ಟಬುದ್ಧಿಯು ಚಂಡಿಕಾಲಯಕ್ಕೆ ತೆರಳಿ ಮದನನಸ್ಥಿತಿಯನ್ನು ನೋಡಿ ಮರುಗಿ, ದುಃಖಿಸಿ, ತನ್ನ ಕಾರ್ಯಕ್ಕೆ ತನ್ನ ವಂಶದ ಕುಡಿ ಬಲಿಯಾದದ್ದನ್ನು ನೋಡಿ ಪಶ್ಚಾತ್ತಾಪಪಟ್ಟು ಕತ್ತಿಯಿಂದ ಇರಿದುಕೊಂಡು ಸತ್ತನು. ನಂತರ ಚಂದ್ರಹಾಸ, ವೀರಸೇನ, ರಣಸಿಂಹರು ಚಂಡಿಕಾಲಯಕ್ಕೆ ತೆರಳಿ ಆ ವಿಷಮ

ಪರಿಸ್ಥಿತಿಯನ್ನು ನೋಡಿ, ಚಂದ್ರಹಾಸನು ಕಾಳಿಕಾ ದೇವಿಗೆ ಪ್ರಾರ್ಥನೆಯನ್ನು ಸಲ್ಲಿಸಿ, ಮದನನ ಕಳೇಬರದ ಮುಂದೆ ಮೊಳಕಾಲೂರಿ ಅವನ ಹಣೆಯನ್ನು ಮುಟ್ಟುತ್ತಾನೆ. ಮದನನಿಗೆ ಹರಣ ಹೋಗದಿರುವುದನ್ನು ಮನಗಂಡು ಮಂತ್ರೌಷಧಿಗಳು, ವೈದ್ಯೋಪಚಾರಗಳಿಂದ ಉಪಚರಿಸಿ ಮದನನ್ನು ಬದುಕಿಸಿದನು.

ಆಕಾಶದಲ್ಲಿ ಸುಮಧುರ ಗಾನವೊಂದು ಕೇಳಿಸುತ್ತವೆ. ಪ್ರಾರ್ಥನಾದೇವಿ ಕೃಪಾದೇವಿ ಭಕ್ತಿದೇವಿಯರು ಹಾಡುವ ಗಾನವೊಂದು ಕೇಳಿಬರುತ್ತದೆ. ಹೀಗೆ ಚಂದ್ರಹಾಸನ ದೈವಶಕ್ತಿಯ ಮಹಿಮೆಯಿಂದ ನಾಟಕವು ಸುಖಾಂತ್ಯವಾಗುತ್ತದೆ.

ಈ ನಾಟಕವನ್ನು ಕುರಿತು ಲಿಂಗದೇವರ ಹಳೆಮನೆಯವರು ತಮ್ಮ ಕುವೆಂಪು ನಾಟಕಗಳ ಹಿನ್ನೋಟದಲ್ಲಿ 'ದುಷ್ಟವ್ಯಕ್ತಿಗಳ ಒಳಸಂಚು, ಕುಟಿಲೋಪಾಯ, ದುಷ್ಟತನ ಹಾಗೂ ಮುಗ್ಧಭಕ್ತಿ, ಒಳ್ಳೆಯತನಗಳ ಮುಖಾಮುಖಿ ಇವೆ. ಒಳ್ಳೆಯದಕ್ಕೆ ಗೆಲುವು ಎಂಬ ತತ್ವವನ್ನು ಈ ನಾಟಕ ಸಾರುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಜೀ.ಶಂ.ಪರಮಶಿವಯ್ಯ ಹೇಳುವಂತೆ – ಈ ನಾಟಕದಲ್ಲಿ ಸುಸಂಬದ್ಧತೆಯನ್ನು ಕಳೆದುಕೊಳ್ಳದೆ, ಸರ್ವಾಂಗ ಸುಪುಷ್ಟವಾಗಿ, ಹೊಸದರ್ಶನವೊಂದರ ಅಭಿವ್ಯಕ್ತಿಯ ಸಾಧನವಾಗಿ, ಅವತರಿಸುವುದರಲ್ಲಿಯೇ ಇಲ್ಲಿನ ಹೊಸತನವನ್ನು ಗುರುತಿಸ-ಬೇಕಾಗಿರುತ್ತದೆ.[೧]

## ಮೂಲಕಥೆ : ಚಂದ್ರಹಾಸ

ಚಂದ್ರಹಾಸನು ಕುಂತಳ ರಾಜ್ಯದ ರಾಜಕುಮಾರ. ಶತ್ರುಗಳ ದಾಳಿಯಿಂದ ಕುಂತಳದ ದೊರೆಯು ಹತನಾಗಿ ಚಂದ್ರಹಾಸನು ದಾಸಿಯ ಆಶ್ರಯದಲ್ಲಿ ಬೆಳೆದನು. ದಾಸಿಯ ಮರಣಾನಂತರ ಅನಾಥನಾಗಿ ಬೀದಿಗೆ ಬಿದ್ದು, ಬೀದಿಮಕ್ಕಳ ಜೊತೆ ಬೆಳೆದನು. ಒಮ್ಮೆ ಉತ್ಸವವೊಂದರಲ್ಲಿ ರಾಮನಾಮವನ್ನು ಜಪಿಸುತ್ತಿದ್ದ ಬಾಲಕನನ್ನು ನೋಡಿದ ಅರಮನೆಯ ಜ್ಯೋತಿಷ್ಯನೊಬ್ಬ "ಈ ಬಾಲಕನಿಗೆ ರಾಜಲಕ್ಷಣಗಳಿವೆ ಮುಂದೆ ಇವನು ಕುಂತಲ ರಾಜ್ಯದ ರಾಜನಾಗುತ್ತಾನೆ" ಎಂದು ಭವಿಷ್ಯ ನುಡಿದನು. ಭವಿಷ್ಯವನ್ನು ಕೇಳಿ ಆ ರಾಜ್ಯದ ಮಂತ್ರಿ ದುಷ್ಟಬುದ್ಧಿಗೆ ಕಸಿವಿಸಿಯಾಯಿತು. ಇವನಿಗೆ ಮದನ ಮತ್ತು ವಿಷಯೆ ಎಂಬ ಮಕ್ಕಳಿದ್ದರು. ಚಂದ್ರಹಾಸ ತನ್ನ ಮಗನು ರಾಜನಾಗುವುದಕ್ಕೆ ಅಡ್ಡಿಯಾಗುವನೆಂದು ಬಗೆದು ಕಟುಕರಿಗೆ ಆಜ್ಞೆಮಾಡಿ ಚಂದ್ರಹಾಸನನ್ನು ಕೊಂದುಬರುವಂತೆ ಆಜ್ಞಾಪಿಸುವನು. ಕಟುಕರು ಚಂದ್ರಹಾಸನ

---

೧. ಉತ್ಕೃಷ್ಟ ನಾಟಕ – ಜೀ.ಶಂ.ಪರವಶಿವಯ್ಯ, ಕುವೆಂಪು ನಾಟಕ ಸಮೀಕ್ಷೆ, ಸಂ. ವಸಂತಕುಮಾರ್ ಪ್ರಕಾಶನ ಸುರುಡಿ, ೧೯೬೩.

ಮುಗ್ಧತೆಗೆ ಮನಸೋತು ಅವನ ಕಾಲಿನ ಆರನೇ ಬೆರಳನ್ನು ಕತ್ತರಿಸಿ ಅದನ್ನು ಮಂತ್ರಿಗೆ ತೋರಿಸಿ ಚಂದ್ರಹಾಸನನ್ನು ಕೊಂದಿದ್ದಾಗಿ ತಿಳಿಸುವರು.

ಚಂದನಾವತಿಯ ಅರಸ ಕುಳಿಂದಕನು ಕಾಡಿಗೆ ಬೇಟೆಗೆ ಬಂದು ಚಂದ್ರಹಾಸನನ್ನು ಮಕ್ಕಳಿಲ್ಲದ ತನ್ನ ಕಾರ್ಯಕ್ಕೆ ಯುವರಾಜನನ್ನಾಗಿ ಮಾಡಿದನು. ವಿಷಯ ತಿಳಿದ ದುಷ್ಟಬುದ್ಧಿ ಚಂದ್ರಹಾಸನ ಕೈಗೆ ಒಂದು ಪತ್ರ ಬರೆಸಿ ಅವನಿಂದಲೇ ತನ್ನ ಮಗ ಮದನನಿಗೆ ತಲುಪುವಂತೆ ಮಾಡಿದನು. ಆದರೆ ಮಾರ್ಗಮಧ್ಯದಲ್ಲಿ ದುಷ್ಟಬುದ್ಧಿಯ ಮಗಳು ವಿಷಯೆಯು ಪತ್ರವನ್ನು ತಿದ್ದಿದ್ದರಿಂದಾಗಿ ಚಂದ್ರಹಾಸ ವಿಷಯೆಯನ್ನು ಮದುವೆಯಾದನು.

ನಂತರ ತನ್ನ ರಾಜ್ಯಕ್ಕೆ ಹಿಂದಿರುಗಿದ ದುಷ್ಟಬುದ್ಧಿ ವಿಷಯ ತಿಳಿದು ಕೋಪಿತನಾಗಿ ದುರ್ಗಿಯ ದೇವಾಲಯದಲ್ಲಿ ಚಂದ್ರಹಾಸನನ್ನು ಕೊಲ್ಲುವಂತೆ ಯೋಜಿಸಿದನು. ಕಾರಣಾಂತರಗಳಿಂದ ಚಂದ್ರಹಾಸನ ಬದಲಿಗೆ ಮದನನು ಹೋದನು. ಚಂಡಾಲರಿಂದ ಸತ್ತನು. ವಿಷಯ ತಿಳಿದ ಚಂದ್ರಹಾಸ ಕುಂತಳ ರಾಜೇಂದ್ರನ ಅರಮನೆಯಿಂದ ದುರ್ಗಾದೇವಾಲಯಕ್ಕೆ ಬಂದು ದುರ್ಗಿಯನ್ನು ಒಲಿಸಿಕೊಂಡು ಮದನ ಹಾಗೂ ದುಷ್ಟಬುದ್ಧಿಯನ್ನು ಬದುಕಿಸಿದನು.

**ಚಂದ್ರಹಾಸ : ನಾಟಕದಲ್ಲಿ ಕಂಡುಬಂದಿರುವ ಬದಲಾವಣೆಗಳು**

ಚಂದ್ರಹಾಸ ನಾಟಕದ ಪ್ರಾರಂಭದಲ್ಲೇ ಭಕ್ತಿದೇವಿ, ಪ್ರಾರ್ಥನಾದೇವಿ ಮತ್ತು ಕೃಪಾದೇವಿಯರಿದ್ದು ಇವರು ಚಂದ್ರಹಾಸನಿಗೆ ಆಪತ್ತಿನ ಸಂದರ್ಭದಲ್ಲಿ ನೆರವು ನೀಡುತ್ತಾ ಆತನಿಗೆ ರಕ್ಷಾಕವಚರಾಗಿರುತ್ತಾರೆ.

ಬಾಲಕ ಚಂದ್ರಹಾಸನು ಬೀದಿಯಲ್ಲಿ ಮಕ್ಕಳೊಂದಿಗೆ ಆಟವಾಡುವಾಗ ಕುವೆಂಪುರವರು ಮೂರು ಬಾಲಕರನ್ನು ಸೃಷ್ಟಿಸಿ, ದುಷ್ಟಬುದ್ಧಿಯ ಬಗೆಗಿನ ಜನರಭಾವನೆ, ಅವನ ನಡತೆ ಮತ್ತು ಹೆಸರಿಗೆ ಹೊಂದಾಣಿಕೆಯಾಗುವ ಅವನ ವ್ಯಕ್ತಿತ್ವ ವಿಚಾರ, ಮದನ, ವಿಷಯರ ಪರಿಚಯ ವಿಷಯೆಯು ರನ್ನದಲಿಯನ್ನು ಚಂದ್ರಹಾಸನನಿಗೆ ಕೊಡುವುದು, ದೇವಿಯರ ನೆನಹು, ಆಶೀರ್ವಾದಗಳು ಚಂದ್ರಹಾಸನಿಗೆ ದೊರೆಯುತ್ತದೆ.

ದುಷ್ಟಬುದ್ಧಿಯ ಚಂಡಾಲರುಗಳಾದ ಭೀಷಣ, ಕಾಳ, ಮಾರ ಎಂಬ ೩ ಜನ ದೈತ್ಯರು ಈ ಕಥೆಯ ಚಕ್ರಗಳಾಗಿದ್ದಾರೆ. ಇವರು ಚಂದ್ರಹಾಸನ ಆರನೆಯ ಬೆರಳನ್ನು ಮತ್ತು ಮದನನ್ನು ಚಂದ್ರಹಾಸನೆಂದು ಬಗೆದು ಬಲಿ ತೆಗೆದುಕೊಳ್ಳುತ್ತಾರೆ.

ಇಡೀ ನಾಟಕದಲ್ಲಿ ಪ್ರಧಾನವಾಗಿ ಕಂಡುಬರುವ ಪಾತ್ರವೆಂದರೆ ಚಂದ್ರಹಾಸ-ನನ್ನು ಸಲಹುವ ಮುದುಕಿಯ ಪಾತ್ರಚಿತ್ರಣವಾಗಿದೆ. ಮುದುಕಿಯು ಚಂದ್ರಹಾಸನನ್ನು

ಸಲುಹಲು ಪಟ್ಟ ಬವಣೆಯು 'ಬಾಲಕನ ಬೈತಿಟ್ಟು, ಕತ್ತಲಲಿ ತೊಟ್ಟಿಲನು ಹೊತ್ತು ಅವರ ಕಣ್ಣಿಗೆ ಬೀಳದಂತೆ ಕಾಡುಮಲೆಗಳಲ್ಲಿ ಅಲೆಅಲೆದು, ಅನ್ನವಿಲ್ಲದೆ ಹಗಲಿರುಳು ನಡೆದು ತೊಳಲಿ" ಎಂಬ ಮಾತುಗಳಲ್ಲಿ ಚಂದ್ರಹಾಸನ ಪಾಲನೆಯಲ್ಲಿ ಅವಳು ಎದುರಿಸಿದ ಕಷ್ಟಗಳ ಸಂಕೋಲೆಯ ಅರಿವಾಗುತ್ತದೆ. ಈ ಮುದುಕಿಯ ಪಾತ್ರವು ಕುವೆಂಪುರವರ ಹೊಸ ಸೃಷ್ಟಿಯಾಗಿದೆ.

ಇದೇ ರೀತಿ ಮುದುಕಿಯ ಜೊತೆಯಲ್ಲಿ ಹೆಂಗಸಿನ ರೂಪದಲ್ಲಿ ಬರುವ ದೇವತೆಯ ಸಂವಾದದಿಂದಾಗಿ ಚಂದ್ರಹಾಸನಿಗೆ ದೈವಕೃಪೆಯಿದ್ದು, ಅವನ ರಕ್ಷಣೆಗೆ ಕಂಕಣಬದ್ಧವಾಗಿ ಭರವಸೆಯನ್ನು ಮುದುಕಿಗೆ ನೀಡುತ್ತಾಳೆ. ಈ ಹೆಂಗಸು ಸಾಯುವ ಸ್ಥಿತಿಯಲ್ಲಿದ್ದ ಮುದುಕಿಗೆ ಕೊನೆಗಾಲದಲ್ಲಿ ಚಂದ್ರಹಾಸನ ರಕ್ಷಣೆಯ ಜವಾಬ್ದಾರಿಯನ್ನು ವಹಿಸಿಕೊಂಡು ಮುದುಕಿಗೆ ತನ್ನ ಕೊನೆಗಾಲವನ್ನು ಕಾಣಲು ಸಹಾಯಮಾಡುತ್ತಾಳೆ.

ಇದೇ ರೀತಿ ಕುವೆಂಪು ತಮ್ಮ ನಾಟಕದಲ್ಲಿ ಭೀಷಣ, ಕಾಳ, ಮಾರರು, ಚಂದ್ರಹಾಸನನ್ನು ಕೊಲ್ಲಲು ಎತ್ತಿದ ಕೈ ಯಾರೋ ಹಿಡಿದಂತಾಗುವುದು, ಚಂದ್ರಹಾಸ ಅಬ್ಬೆಯ ಜೊತೆ ಮಾತಾಡುವುದು, ಕಾಡಿಗೆ ಪುಳಿಂದರು ಅರಣ್ಯ ಪದಾರ್ಥಗಳ ಸಂಗ್ರಹಕ್ಕಾಗಿ ಬರುವುದು, ಕುಳಿಂದಕ ಚಂದ್ರಹಾರನ ಭೇಟಿ, ಚಂದನಾವತಿಯಲ್ಲಿ ಚಂದ್ರಹಾಸನ ಮಹಿಮೆ, ನಾಡಿಗೆ ಒದಗಿದ ಸಂವೃದ್ಧತೆ, ಇದನ್ನು ರಾಜ್ಯದ ಪಂಡಿತರು, ಜನರು ಅವನ ಮಹಿಮೆಯನ್ನು ಸಾರುವರು. ಇವು ಕುವೆಂಪುರವರ ಈ ನಾಟಕದಲ್ಲಿ ಮಾಡಿರುವ ನವವರ್ಣ ಸ್ಪರ್ಶವಾಗಿದೆ.

ಚಂದ್ರಹಾಸನ ಜೊತೆಯಲ್ಲಿ ವೀರಸೇನ, ರಣಸಿಂಹ ಮುಂತಾದ ಸೇನಾಧಿಕಾರಿಗಳು ಅವನಿಗೆ ಸದಾಬೆಂಗಾವಲಾಗುವಂತೆ ಮಾಡಿದ್ದಾರೆ.

ನಾಟಕದ ಕೊನೆಯಲ್ಲಿ ಸುಖಾಂತ್ಯವಾಗಿ ಭಕ್ತಿದೇವಿ, ಪ್ರಾರ್ಥನಾದೇವಿ ಮತ್ತು ಕೃಪಾದೇವಿಯರು ಒಟ್ಟಿಗೆ ಮೂವರೂ ನರ್ತಿಸುತ್ತಾ ಹಾಡುತ್ತಾ ಮರೆಯಾಗುವರು.

**ಚಂದ್ರಹಾಸ ನಾಟಕದಲ್ಲಿ ಬದಲಾವಣೆಯ ಪ್ರಸಂಗಗಳು**

ಚಂದ್ರಹಾಸ ನಾಟಕದ ಆರಂಭದಿಂದ ಕೊನೆಯವರೆಗೂ ಭಕ್ತಿದೇವಿ, ಪ್ರಾರ್ಥನಾದೇವಿ ಮತ್ತು ಕೃಪಾದೇವಿಯರ ಪಾತ್ರವಿದ್ದು, ಅವರು ಚಂದ್ರಹಾಸನಿಗೆ ಅವನ ಕನಸಿನಲ್ಲಿ, ವಿಪತ್ತಿನ ಸನ್ನಿವೇಶದಲ್ಲಿ, ಹಾಡಿ, ಹರಸುತ್ತಾ, ಅವನಿಗೆ ರಕ್ಷಾಬಂಧನವನ್ನು ತೊಡಿಸುತ್ತಾರೆ. ಅಂತಹ ಸನ್ನಿವೇಶಗಳೆಂದರೆ,

**ಚಂದ್ರಹಾಸ:** (ಗಾಲವನು ಚಂದ್ರಹಾಸನ ಮುಖದಲ್ಲಿರುವ ರಾಜಕಳೆಯನ್ನು
ಗುರುತಿಸುವ ಸಂದರ್ಭದಲ್ಲಿ)

ಹೆದರದಿರಿ, ಅಣ್ಣಂದಿರ, ನನಗೇನು ಆಗಿಲ್ಲ
ಅಂಬರದಿ ಕಾಣಿಸಿದರೆನಗೆ ದೇವಿಯರ್ ಮೂವರ್
ಅಂಬುದಗಳೆಡೆ ಪಾಡುತಿರ್ದರ್ ನೃತ್ಯಂಗೆಯ್ದು
ನನ್ನ ಆಶೀರ್ವದಿಸಿದರ್, ಆ ಪುರೋಹಿತರಂತೆ
ಚಿನ್ನದೊಡೆಯವಳೊರ್ವಳ್! ಬೆಳ್ಳಿಯುಡೆಯವಳೊರ್ವಳ್
ಪಚ್ಚೆನೀಲಿಯನುಟ್ಟ, ರನ್ನದುಡೆಯವಳೊರ್ವಳ್!
ನಿಮಗಾರಿಗೂ ಕಾಣಲಿಲ್ಲವೆ ಅವರು?

ಈ ಸನ್ನಿವೇಶಗಳು ಚಂದ್ರಹಾಸನ ಅಸಾಮಾನ್ಯ ಅಧ್ಯಾತ್ಮಕ ಶಕ್ತಿಯ ಪರಿಪಕ್ವತೆಯನ್ನು ಕುವೆಂಪು ತಮ್ಮ ಕಲ್ಪನೆಯ ಬರಹದಲ್ಲೇ ತೋರಿಸಿದ್ದಾರೆ.

ಬಾಲಕ ಚಂದ್ರಹಾಸನು ತನ್ನ ತಂದೆಯ ಅಕಾಲಿಕ ಮರಣದಿಂದಾಗಿ, ಶತ್ರುಗಳ ಖಡ್ಗದಿಂದ ಪಾರಾಗಿ, ಬೀದಿ ಪಾಲಾದ ಸಂದರ್ಭದಲ್ಲಿ ಮನುಷ್ಯರು ನೀಡುವ ಅತೀತವಾದ ನೆರವನ್ನು ತಮ್ಮ ಸೃಷ್ಟಿಯ ದೇವತೆಗಳಾದ ಭಕ್ತಿದೇವಿ, ಪ್ರಾರ್ಥನಾದೇವಿ, ಕೃಪಾದೇವಿಯರಿಗೆ ಆ ಜವಾಬ್ದಾರಿಯನ್ನಿತ್ತು ಅವರಿಂದಲೇ ರಕ್ಷಣಾ ಪ್ರೋಕ್ಷವನ್ನು ಚಂದ್ರಹಾಸನಿಗೆ ಸೂಚಿಸಿದ್ದಾರೆ.

**ಕೃಪಾದೇವಿ:** (ಪ್ರಾರ್ಥನಾದೇವಿ ಮತ್ತು ಭಕ್ತಿ ದೇವಿಯರನ್ನು ಕುರಿತು)
ಬನ್ನಿ, ಕುಂತಳನಗರಕಿಳಿಯುವಂ, ಭಕ್ತಸನ್ನಿಧಿಗೆ
ಅರಳಿಸೆ ವಿಭೂತಿಯಂ ನೆರೆವಾಗುವಂ ವಿಧಿಗೆ!

ಹೀಗೆ ನಾಟಕದ ಆದಿಯಿಂದ ಅಂತ್ಯದವರೆಗೂ ರಕ್ಷಾಬಲೆಯಲ್ಲೇ ಚಂದ್ರಹಾಸ–ನನ್ನು ಸಲುಹಿದ್ದಾರೆ.

ಇಡೀ ನಾಟಕದಲ್ಲಿ ಕಂಡುಬರುವ ಪ್ರಧಾನ ಪಾತ್ರವಿನ್ಯಾಸವೆಂದರೆ, ಮುದುಕಿಯ ಪಾತ್ರ. ಈಕೆಯ ಚಂದ್ರಹಾಸನ ಲಾಲನೆ–ಪಾಲನೆಯಲ್ಲಿ ಪಟ್ಟ, ಅಡ್ಡಿ–ಆತಂಕಗಳು, ಸಂಕಷ್ಟಗಳ ಪರಿಸ್ಥಿತಿಯು ಚಿತ್ರಿತವಾಗಿವೆ.

**ಮುದುಕಿ:**

"ಅರಿನೃಪವ ಕೇರಳವ ಮುತ್ತಿದರು. ದೊರೆ ರಣದಿ
ಕಾದಾಡಿ ಮೃತ್ಯುವಿಗೆ ತುತ್ತಾದ ಅವನ ಪತಿವ್ರತೆ
ರಾಣಿ ಈ ಬಾಲಕನ ತಾಯಿ ಸಹಗಮಿಸಿದಳು.
ಹಗೆಯವರು ಅರಸುಕುವರನ ಕೊಲ್ಲಲೆಂದರಸಿದರು.
ದೂತರನಟ್ಟಿ ಎಲ್ಲೆಲ್ಲಿಯಂ ಸೋದಿಸಿದರು

ನಾನು ಮೊದಲೆಯೆ ಅರಿತು, ಬಾಲಕನ ಬೈತಿಟ್ಟು
ತಾವಿಂದೆ ಕತ್ತಲಲ್ಲಿ ತೊಟ್ಟಿಲನು ಹೊತ್ತು
ಅವರ ಕಣ್ಣಿಗೆ ಬೀಳದಂತೆ, ಕಾಡು ಮಲೆಗಳಲಿ
ಅಲೆಅಲೆದು ಅನ್ನವಿಲ್ಲದೆ ಹಗಲಿರುಳುನಡೆದು
ತೊಳಲಿ ಕಡೆಗೀ ನಗರಿಗೈತಂದೆ. ಇಲ್ಲಿ ದಿನವೂ
ತಿರಿದು ಸಲಹಿದೆ ಕಂದನಂ"

ಇದು ಚಂದ್ರಹಾಸನ ಬಾಲ್ಯಜೀವನ ಆತನ ರಾಜವಂಶಜರ ಬಗ್ಗೆ ತಿಳಿಯುತ್ತದೆ, ಮತ್ತು ಮುದುಕಿಯ ಅರಮನೆಯ ಉಪ್ಪಿನ ಋಣಕ್ಕಾಗಿ ಮಾಡಿದ ನಿಯತ್ತಿನ ಸೇವೆಯನ್ನು ಬಿಂಬಿಸುತ್ತದೆ. ಅರಮನೆಯಲ್ಲಿ ಸುಖಸಂತೋಷ, ಐಶ್ವರ್ಯ ಭೋಗಗಳಿಂದ ಬೆಳೆಯಬೇಕಾದ ರಾಜಕುಮಾರ ಬೀದಿಬಾಲಕನಂತೆ 'ಪರರ ಆಶ್ರಯದಲ್ಲಿ ಅನಾಥನಾಗಿ ಬೆಳೆದ ಸನ್ನಿವೇಶವನ್ನು ತೋರಿಸುತ್ತದೆ.

"ಭಗವಂತನಿಲ್ಲದಿರೆ ನಾನೇಸರವಳು? ಅವನೆ
ಕಾಪಾಡಿದನು ದಿಟ : ನಾನೇ ಬರಿ ನಿಮಿತ್ತ!"

ಆದರೆ,

"ಎಷ್ಟೋ ಕಷ್ಟವ ಸಹಿಸಿ ಪಾಲಿಸಿದೆ ಮೊಗವು
ಇಡೆ ತೊಟ್ಟಿಲಿಲ್ಲ : ಆಡಿಸುವವರಿಲ್ಲ, ಮನೆಯಿಲ್ಲ
ಉಡುಗೆ ತೊಡುಗೆಗಳಿಲ್ಲ; ಎರೆಯ ನೀರಿಲ್ಲ
ಕುಡಿಸಿ ಹಾಲಿಲ್ಲ, ಎಣ್ಣೆ ಬೆಣ್ಣೆಗಳಿಲ್ಲ; ಮುದ್ದಿಸಲು
ತಾಯ್ತಂದೆಯರುಮಿಲ್ಲ, ಅದನ್ನೆಲ್ಲ ಕಂಡೆನ್ನ
ಕರುಳುರಿದು. ಎದೆ ಬೇಯುತ್ತಿತ್ತು ಆದರೂ
ಮೊಳೆವಲ್ಲು, ಉಗುವ ಜೊಲ್ಲು ದಟ್ಟಿತಡಿ, ತೊದಲುನುಡಿ
ತೊಳತೊಳಗುತಿಹ ಸೊಬಗು, ಮೆರೆವ ನಗುಮೊಗದ ಬಗೆ
ಪೊಳೆವಕಣ್, ನುಣ್‌ಕದಪು ಚಿಲ್ಪಘಣೆ ಇವೆಲ್ಲಮಂ
ನೋಡಿ, ಬಾಲಕನ ಲೀಲೆಯಂ ಕಂಡು ಹಿಗ್ಗಿ
ಸುಖಿಯಾದೆ....."

ಇಲ್ಲಿ ಮುದುಕಿಯು ಚಂದ್ರಹಾಸನನ್ನು ಪಾಲನೆ-ಮಾಡಲು ಪಡುವ ಬವಣೆಯು ಬೆಟ್ಟದಂತಿದ್ದರೂ, ಮಗುವಿನ ಸಾನಿಧ್ಯ, ಅವನ ನಗುವಿನಿಂದ, ಅದು ಮೋಡದಂತೆ ಕರಗಿ ನೀರಿನಂತಾಗುತ್ತಿತ್ತು. ಇಲ್ಲಿ ಸುಖ-ದುಃಖ ಮತ್ತು ನೋವು-ನಲಿವಿನ ಮುಖವನ್ನು ನಾಣ್ಯದ ಎರಡು ಮುಖಗಳಂತೆ ಕುವೆಂಪು ಚಿತ್ರಿಸಿದ್ದಾರೆ.

ಇದೇ ರೀತಿ ಕುವೆಂಪುರವರ ಹೆಂಗಸಿನ ರೂಪದಲ್ಲಿರುವ ದೇವತೆಯು ಮುದುಕಿಯ ಜೊತೆ ಸಂಪಾದಿಸುತ್ತಾ ಆಕೆಗೆ ಧೈರ್ಯ ತುಂಬುತ್ತಾಳೆ.

ಹೆಂಗಸು "ನಾನಿಲ್ಲೆ ಗುಡಿಯ ಗುಡಿಸುವ ದಾಸಿ
ನೀನಿಲ್ಲಿಗೈತಂದ ದಿನದಿಂದ ನಿನ್ನನಾ
ಗುಡಿಯೊಡೆಯ ನೀನರಿಯದಂತೆ ರಕ್ಷಿಸುತಿಹನು
ನಿಮ್ಮಿರ್ವರನು, ಅವನೆ ಕಳುಹಿದ ನಿಂದು ನನ್ನನ್
ನಿನ್ನೆಡೆಗೆ, ಎದೆಗೆಡದಿರಜ್ಜೀ ಭಗವಂತನಿಗೆ
ಸೇರಿಹುದು ನಿನ್ನ ಕಂದನ ಕಾವು" ಎಂದು ಮುದುಕಿಗೆ

ಹೇಳುವಾಗ ಮುದುಕಿ ಮತ್ತು ಚಂದ್ರಹಾಸರಿಗೆ ನಗರಕ್ಕೆ ಬಂದಾಗಿನಿಂದಲೂ ದೈವರಕ್ಷಣೆಯನ್ನು ಕೊಡುತ್ತಾ ಅಂಗೈಯ ಗೊಂಬೆಯಂತೆ ಸಲುಹುವ ಭರವಸೆಯನ್ನು ಕೊಡುವಳು. ಇದರಿಂದ ಚಂದ್ರಹಾಸನಿಗೆ ದೈವಬಲವಿದೆಯೆಂದೂ ಖಾತ್ರಿಯಾಗುತ್ತದೆ.

ಈ ನಾಟಕದ ಕಥಾನಾಯಕಿ ವಿಷಯೆ. ಇವಳೇ ಈ ನಾಟಕಕ್ಕೆ ಚಾಲಕಿ. ಇವಳು 'ವಿಷಮ ಮೋಹಿಸುವಂತೆ' ಎಂಬುದನ್ನು ವಿಷಯೆ ಮೋಹಿಸುವಂತೆ' ಎಂಬುದಾಗಿ ತನ್ನ ಎಡಗೈ ಬೆರಳಿನ ಉಗುರಿನಿಂದ ತಿದ್ದುದ್ದರಿಂದಲೇ ನಾಟಕವು ತನ್ನ ಪಥವನ್ನು ಬದಲಿಸುತ್ತದೆ. ಇವಳು ಸ್ವಭಾವದಲ್ಲಿ ಮುಗ್ದತನ, ಪ್ರೇಮ, ಪ್ರೀತಿಯ ಒಲುಮೆ ಕಂಡುಬರುತ್ತದೆ.

ಇದೇ ರೀತಿ ಕುವೆಂಪು ಚಿತ್ರಿಸಿರುವ ಚಂಡಾಲರಾದ ಭೀಷಣ, ಮಾರ, ಕಾಳರ ಸ್ವಾಮಿನಿಷ್ಠೆ, ವಿಧೇಯತೆಯನ್ನು ಹಾಗೂ ಕ್ರೂರಮನಸ್ಸಿನಲ್ಲಿರುವ, ಮಾನವೀಯತೆಯನ್ನು ಕುವೆಂಪು ತೆರೆದು ತೋರಿಸಿದ್ದಾರೆ. ಚಂದ್ರಹಾಸನು ಗೋವಿಂದ ಶ್ರೀಹರಿ ಎಂದು ಹಾಡುತ್ತಾ ಎದ್ದು ನಿಲ್ಲುತ್ತಾನೆ. ಅವನ ಕಾಲಿಗೆ ಬಿದ್ದ ಕಾಳ, ಭೀಷಣ ಮಾರರು ಚಂದ್ರಹಾಸನ ಆರನೆಯ ಬೆರಳನ್ನು ಗಮನಿಸಿ 'ಈ ಬೆರಳು ನಮ್ಮನ್ನೂ ಉಳಿಸುತ್ತದೆ; ಅವನನ್ನೂ ಉಳಿಸುತ್ತದೆ' ಎಂದೆಣಿಸಿ ಕತ್ತರಿಸುವರು. ಇಲ್ಲಿ ಅವರಿಗಿರುವ ಸ್ವಾಮಿನಿಷ್ಠೆಯ ಭಯ ಹಾಗೂ ಚಂದ್ರಹಾಸನ ದೈವಶಕ್ತಿಯ ಬಗೆಗಿರುವ ಭಯಗೌರವಗಳ ಒಟ್ಟಿಗೆ ಮೇಳೈಸುವಂತೆ ಈ ಪ್ರಸಂಗದಲ್ಲಿ ಕುವೆಂಪು ಮಾಡಿದ್ದಾರೆ.

ಚಂದ್ರಹಾಸನಿಗೆ ಮೂವರು ದೇವಿಯರಂತೆ ರಣಸಿಂಹ, ವೀರಸೇನರೆಂಬ ಸೇನಾಧಿಕಾರಿಗಳು ಸ್ನೇಹಿತರಂತಿದ್ದು ಅವನಿಗೆ ಬೆಂಗಾವಲಾಗಿ ಪ್ರಾರಂಭದಿಂದ ಅಂತ್ಯದವರೆಗೂ ಅವನ ಜೊತೆಗಿದ್ದಾರೆ. ಇಲ್ಲಿ ದೇವಿಯರು ಚಂದ್ರಹಾಸನನ್ನು ಅದೃಶ್ಯರೂಪದಲ್ಲಿ ರಕ್ಷಿಸುತ್ತಿದ್ದರೆ, ರಣಸಿಂಹ, ವೀರಸೇನರು ಗೋಚರ ರೂಪದಲ್ಲೇ

ಸನಿಹದಲ್ಲೇ ಬೆಂಗಾವಲಾಗಿ ರಕ್ಷಿಸುತ್ತಿರುತ್ತಾರೆ. ಇದು ಕುವೆಂಪುರವರ ದೃಶ್ಯ ಅದೃಶ್ಯ ಪಾತ್ರಗಳಲ್ಲಿ ಅವರು ತೋರಿರುವ ಭಿನ್ನರೂಪತೆಯನ್ನು ಮನಗಾಣಬಹುದು.

ರಣಸಿಂಹ ವೀರಸೇನರು ಚಂದ್ರಹಾಸನ ಜೊತೆ ಕುಂತಳಕ್ಕೆ ಪತ್ರವನ್ನು ತರುವಾಗ ಅವನಿಗೆ ಬೆಂಗಾವಲಾಗಿ ಬರುವರು, ಕುಂತಳೇಂದ್ರನ ಕರೆಗೆ ಓಗೊಟ್ಟು ಅವನ ಜೊತೆ ತೆರಳುವರು ಹಾಗೂ ಚಂಡಿಕಾಲಯಕ್ಕೆ ಅವನ ಜೊತೆ ಬರುವ ಸನ್ನಿವೇಶಗಳಲ್ಲಿ ಅವರು ಚಂದ್ರಹಾಸನನ್ನು ನೆರಳಿನಂತೆ ಅವನ ಹಿಂಬಾಲಕರಾಗಿರುತ್ತಾರೆ.

ಒಟ್ಟಿನಲ್ಲಿ ಈ ಚಂದ್ರಹಾಸ ನಾಟಕದಲ್ಲಿ ದುಷ್ಟಬುದ್ಧಿ ಮತ್ತು ಚಂದ್ರಹಾಸರ ನಡುವಿನ ತಂತ್ರ ಮತ್ತು ವಿಧಿಯ ನಡುವಿನ ಆಟವಾಗಿದೆ. ಈ ನಾಟಕದಲ್ಲಿ ಕುವೆಂಪುರವರು "ತಾನೊಂದು ಬಗೆದರೆ ದೈವವೊಂದು ಬಗೆಯುವುದು" ಎಂಬ ಸಾಮಾನ್ಯ ತತ್ವನ್ನು ನಿರೂಪಿಸಿದ್ದಾರೆ. ಇದೇ ರೀತಿ ಮನುಷ್ಯ ಪ್ರಯತ್ನ ಕೇಡು, ವ್ಯರ್ಥ, ವಿಧಿಯಾಟವೇ ಮೇಲು! ಎಂಬುದನ್ನು ತೋರಿಸಿದ್ದಾರೆ.

ಈ ನಾಟಕಕ್ಕೆ ಬಸವಣ್ಣನ ಈ ಕೆಳಗಿನ ವಚನವು ಬಹಳ ಹೊಂದಿಕೆಯಾಗುತ್ತದೆ.

ತನಗೆ ಮುನಿದರಿಗೆ ತಾ ಮುನಿಯಲೇಕಯ್ಯ
ತನಗಾದ ಆಗೇನು? ಅವರಿಗಾವ ಚೇಗೇನು?
ತನುವಿನ ಕೋಪ ತನ್ನ ಹಿರಿತನದ ಕೇಡು
ಮನದ ಕೋಪ ತನ್ನ ಅರಿವಿಗೆ ಕೇಡು
ಮನೆಯೊಳಗಣ ಕಿಚ್ಚು ಮನೆಯಸುಟ್ಟಲ್ಲದೆ
ನೆರೆಮನೆಯ ಸುಡದು ಕೂಡಲಸಂಗಮದೇವಾ. ಎಂಬಂತೆ

ದುಷ್ಟಬುದ್ಧಿಯ ಅಸೂಯೆಯು ಅವನಿಗೇ ತಿರುಗುಬಾಣವಾಗಿ ಅವನನ್ನೇ ಬಲಿತೆಗೆದು-ಕೊಂಡಿತು. ತಾನು ತೋಡಿದ ಮೃತ್ಯು ಹೊಂಡಕ್ಕೆ ತನ್ನ ಮಗನೇ ಬಲಿಯಾದದ್ದು ವಿಧಿಯ ವಿಪರ್ಯಾಸವೇ ಸರಿ.

ಕುವೆಂಪು ಈ ನಾಟಕದಲ್ಲಿ ಸೃಷ್ಟಿಸಿರುವ ಪ್ರಾರ್ಥನಾದೇವಿ, ಕೃಪಾದೇವಿ, ಭಕ್ತಿದೇವಿಯರ ಪಾತ್ರದಿಂದಾಗಿ ಅವರಲ್ಲಿರುವ ಆಧ್ಯಾತ್ಮಕ ಲೇಪನದ ಅರಿವು ಗೋಚರವಾಗುತ್ತದೆ. ಚಂದ್ರಹಾಸನಿಗೆ ವಿಧಿಯು ಪರವಾಗಿದ್ದನ್ನು ಅರಿತ ಕುವೆಂಪು ತಮ್ಮ ನಾಟಕದಲ್ಲಿ ದೇವತೆಯನ್ನು, ಹೆಂಸನ್ನು ಸೃಷ್ಟಿಸಿ ಆಕಾಶದಿಂದ ಚಂದ್ರಹಾಸನಿಗೆ ರಕ್ಷೆ ನೀಡಲು ಬರುವಂತೆ ಮಾಡಿದ್ದಾರೆ.

ಕುವೆಂಪುರವರ ಪ್ರತಿಭೆ ಕಂಡುಬರುವುದು. ಅವರು ಸೃಷ್ಟಿಸಿರುವ ಪಾತ್ರ ವೈವಿಧ್ಯತೆಯಲ್ಲಿ, ಭೀಷಣ, ಮಾರ, ಕಾಳರಂತಹ ಚಂಡಾಲರು, ರಣಸಿಂಹ

ವೀರಸೇನರೆಂಬ ಚಂದ್ರಹಾಸನ ಸ್ನೇಹಿತರು, ಮುದುಕಿ, ಹೆಂಗಸು, ಬಾಲಕರು, ಬೇಟೆಗಾರರು, ಚಂದನಾವತಿಯ ಪ್ರಜೆಗಳು........ ಮುಂತಾದ ಪಾತ್ರಗಳನ್ನು ಸೃಷ್ಟಿಸಿ ಪಾತ್ರವೈವಿಧ್ಯತೆಯ ಮೂಲಕ ನಾಟಕಕ್ಕೆ ಮೆರುಗನ್ನು ನೀಡಿದ್ದಾರೆ. ಹೀಗೆ ಚಂದ್ರಹಾಸನ ಜೀವನವು ದೈವಶಕ್ತಿಯ ರಕ್ಷಣೆಯೊಂದಿಗೆ ಸುಖಾಂತ್ಯವಾಗುತ್ತದೆ.

**ನಾಟಕ: ಕಾನೀನ**

ನಾಟಕ ಆರಂಭವಾಗುವುದೇ ವಿಧಿವಾಣಿಯಿಂದ. ಇದು ನಾಟಕಕ್ಕೆ ನಾಂದಿ ಮಾತುಗಳಂತೆ ಬಳಕೆಯಾಗಿದೆ.

ಗಂಗಾತೀರದ ಬನದಲ್ಲಿ ಕನ್ಯೆಯಾದ ಕುಂತಿದೇವಿ ಹೂವು ಮೊದಲಾದವು-ಗಳನ್ನು ಆಯ್ದುಕೊಂಡು ಬರುವಳು, ಹಿಂದೆ ದೂರ್ವಾಸ ಮುನಿಯು ಕೊಟ್ಟ ಐದು ವರಗಳಲ್ಲಿ ಸೂರ್ಯಮಂತ್ರವೂ ಒಂದಾಗಿದ್ದು, ಈ ವರಗಳಲ್ಲಿ ಮಹಿಮೆ ಇರುವುದೇ? ಎಂದು ಬಾಲ್ಯ ಸಹಜವಾದ ಕುತೂಹಲದಿಂದ ಸೂರ್ಯದೇವನನ್ನು, ಪೂಜಿಸುವಳು. ಕುಂತಿದೇವಿಯ ಪ್ರಾರ್ಥನೆಗೆ ಒಲಿದ ಸೂರ್ಯದೇವನು ಕೈಯಲ್ಲಿ ಶಿಶುವೊಂದನ್ನು ಹಿಡಿದು ಬಂದು ಕುಂತಿಯ ಬಳಿನಿಂತು, 'ಬಾಲೆ, ಕುಂತಿಯೆ, ನಿನ್ನ ಬಯಕೆಯನ್ನು ಸಲ್ಲಿಸಲು ನೋಡಿದೋ ಬಂದಿಹೆನು" ಎಂದು, ಮಗು ಕರ್ಣನನ್ನು ದಯಪಾಲಿಸುವನು. ಕುಂತಿಯು ನಾಚುತ್ತಾ ಕರ್ಣನನ್ನು ಪರಿಗ್ರಹಿಸುವಳು. ನಂತರ ಕನ್ಯೆಯಾದ ಆಕೆ ಲೋಕಾಪವಾದಕ್ಕೆ ಹೆದರಿ, ಮಗುವಿನೊಂದಿಗೆ ಆತ್ಮಹತ್ಯೆಗೆ ಯತ್ನಿಸಿ, ಗಂಗೆಯ ಮಾತಿನಂತೆ ನದಿಯಲ್ಲಿ ಬಿಟ್ಟು, ಗಂಗಾಮಾತೆಗೆ ಅರ್ಪಿಸುವಳು. ಇದೇ ವೇಳೆಗೆ ನದಿಯಲ್ಲಿ ಮೀನನ್ನು ಹಿಡಿಯಲು ಬಂದ ಸೂತ ಮತ್ತು ರಾಧೆಯ ದಂಪತಿಗಳಿಗೆ ಮಗುವು ಸಿಕ್ಕಿ ಅವರ ಪಾಲನೆಯಲ್ಲಿ ಬೆಳೆಯುತ್ತದೆ.

ಕುವೆಂಪುರವರ ವ್ಯಕ್ತಿತ್ವ ಪಂಪನ ಗ್ರಹಿಕೆಗೆ ಹೆಚ್ಚು ಸ್ಪಂದಿಸುವಂಥದ್ದು, ಏಕಲವ್ಯನ ಪ್ರಸಂಗವನ್ನು 'ಬೆರಳ್‌ಗೆ ಕೊರಳ್' ನಾಟಕದಲ್ಲಿ ಕುವೆಂಪು ನಿರ್ವಹಿಸಿದ ಕ್ರಮವನ್ನು ಗಮನಿಸಿದಾಗ 'ಕಾನೀನ' ನಾಟಕ ನಮಗೆ ಭಿನ್ನ ರೀತಿಯ ಅನುಭವ ನೀಡುವುದು ಸಾಹಿತ್ಯ ವಿಮರ್ಶಕ ಕುತೂಹಲದಿಂದ ಗಮನಿಸಬೇಕಾದ ಸಂಗತಿಯಾಗಿದೆ.[೧]

ಮಗು ಕರ್ಣನ ಮನಸ್ಸು ಗೊಂದಲಕ್ಕೆ ಒಳಗಾಗುವುದು. ಅವನಿಗೆ ಏನೇನೋ ಚಿತ್ರಗಳು ಕನಸ್ಸಿನಂತೆ ಮನಸ್ಸಿಗೆ ಸುಳಿಯುತ್ತಿದ್ದವು. ಯಾವುದೋ ಒಂದು ಯುದ್ಧದಲ್ಲಿ ರಾಜ ಮಹಾರಾಜರೊಡನೆ ಕಾದಾಡುವಂತೆ ತೋರುವುದು. ಯಾವನೋ ಮಹಾತ್ಮನಲ್ಲಿ ಶಸ್ತ್ರಾಸ್ತ್ರಗಳ ಅಭ್ಯಾಸ ಮಾಡುವಂತೆ, ಕೆಲವು ಸಾರಿ ರತ್ನಖಚಿತವಾದ

---

೧. ನರಹಳ್ಳಿ ಬಾಲಸುಬ್ರಹ್ಮಣ್ಯ – ಕುವೆಂಪು ನಾಟಕಗಳ ಅಧ್ಯಯನ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೨. ಪು. ೧೩೦

ಕಿರೀಟವನ್ನು ಧರಿಸಿರುವ ಮಹಾಚಕ್ರವರ್ತಿಯೊಡನೆ ಸರಸದಿಂದ ಕೈಹಿಡಿದು ಆಡಿದಂತೆ ಕಾಣುವುದು. ಹೀಗೆ ಮುಂದಿನ ಮಹಾಸಂಗ್ರಾಮದ ಸೂಚನೆಗಳು ಅವನಿಗೆ ಅವ್ಯಕ್ತರೂಪದಲ್ಲಿ ದೊರೆಯುತ್ತವೆ. ಒಮ್ಮೆ ಪರಶುರಾಮನು ಇವನು ಕುಳಿತಿದ್ದ ನದಿ ದಡದಲ್ಲಿ ಬಂದು ಕರ್ಣನನ್ನು ನೋಡಿ 'ಬಾಲಕನೆ, ನಿನ್ನ ಮುಖಕಾಂತಿ ಮಹಾವೀರ ಪುರುಷನನ್ನು' ಸೂಚಿಸುತ್ತದೆ ಎಂದು ಹೇಳಿ ತನ್ನ ಶಿಷ್ಯರೊಡನೆ ಮರೆಯಾಗುತ್ತಾನೆ. ಅಂದಿನಿಂದ ಅವನ ಕನಸಿನಲ್ಲಿ ಯುದ್ಧಗಳು, ಬಿಲ್ಲುಗಳು, ಬಾಣಗಳು, ನೃಪತಿಗಳು, ಇವೇ ಅವನ ಲೋಕವಾಗಿ ಬಿಡುತ್ತವೆ. ಇಂತಹ ತನ್ನ ಮನದಾಸೆಯನ್ನು ರಾಧೆಗೆ ತಿಳಿಸಿ ಅವಳನ್ನು ಒಪ್ಪಿಸುತ್ತಾನೆ. ಇದೇ ವೇಳೆಗೆ ಸೂತನಿಗೆ, ನದಿಯಲ್ಲಿ ಹರಡಿದ್ದ ಮೀನಿನ ಬಲೆಗೆ ಬಿಲ್ಲು ಬತ್ತಳಿಕೆಗಳು ಸಿಗುತ್ತವೆ. ತನ್ನ ಸಾಕು ತಂದೆಯಾದ ಸೂತನಿಂದ ಬಿಲ್ಲುಬತ್ತಳಿಕೆಯನ್ನು ಪಡೆದು, ಅವನಿಂದ ಒಪ್ಪಿಗೆಯನ್ನೂ ಪಡೆದು ಪರುಶರಾಮನಲ್ಲಿಗೆ ಬಿಲ್ವಿದ್ಯಾಭ್ಯಾಸಕ್ಕೆ ತೆರಳುವನು.

ಹೀಗೆ ಗುರುವನ್ನರಸುತ್ತಾ ಅರಣ್ಯಕ್ಕೆ ಬಂದ ಕರ್ಣನು, ಪರಶುರಾಮನ ಶಿಷ್ಯರಾದ ಮೂರು ಜನ ಬ್ರಹ್ಮಚಾರಿಯರನ್ನು ಹುಲಿಯ ಬಾಯಿಂದ ಕಾಪಾಡುತ್ತಾನೆ. ನಂತರ ಗುರುಗಳಾದ ಪರಶುರಾಮರನ್ನು ಕಂಡು ತನ್ನ ಹೆಸರು ರಾಧೇಯನೆಂದೂ, ತಾನು ಸೂತಪುತ್ರನೆಂದೂ, ಬಿಲ್ವಿದ್ಯೆಯನ್ನು ತಮ್ಮಲ್ಲಿ ಕಲಿಯಬೇಕೆಂದೂ, ಅದಕ್ಕಾಗಿ ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಭಿನ್ನವಿಸಿದನು. ಪರುಶುರಾಮನು ಬಾಲಕ ರಾಧೇಯನ ಪ್ರಾಮಾಣಿಕತೆ, ಗಾಂಭೀರ್ಯತೆ ಮೆಚ್ಚಿ ಶಿಷ್ಯನಾಗಿ ಸ್ವೀಕರಿಸಿ, ಬಿಲ್ವಿದ್ಯಾಪ್ರವೀಣನನ್ನಾಗಿಸಿದನು.

ರಾಧೇಯನ ಕರಚಾತುರ್ಯಕ್ಕೆ, ದೂರದ ಮರದ ನೆತ್ತಿಯಲ್ಲಿ, ಕೆಂಪಾಗಿ ರಂಜಿಸುತ್ತಿದ್ದ ಹೂವನ್ನು ಕತ್ತರಿಸಿದ್ದು, ತನ್ನ ಸಹಚರರು ಆಗಸಕ್ಕೆ ಎಸೆದ ಕಲ್ಲನ್ನು ಮಾರ್ಗಮಧ್ಯದಲ್ಲೇ ಬಾಣದಿಂದ ಹೊಡೆದು ಪುಡಿಮಾಡಿದ್ದು ಸಾಕ್ಷಿಯಾಗಿತ್ತು. ಇದನ್ನು ದೂರದಿಂದಲೇ ಗಮನಿಸಿದ ಪರುಶುರಾಮ 'ರಾಧೇಯ ಇಂದಿಗೆ ನೀನು ಚಾಪಾಗಮ ಕೋವಿದನಾದೆ' ಎಂದು ತಿಳಿಸಿ ಇದೇ ಸಮಯಕ್ಕೆ ತನ್ನ ಗುರುವನ್ನು ಕಾಣಲು ಬಂದ ಭೀಷ್ಮನಿಗೆ ಕರ್ಣನನ್ನು ಪರಿಚಯಿಸಿ; 'ಗಜಪುರಿಗೆ ಹೋದಯಾದೊಡೆ ನಿನಗೆ ಬೇಕಾದ ಸಂಗ ದೊರೆಕೊಳ್ಳುವುದು ನೀನಲ್ಲಿ ನಿನ್ನ ಶೌರ್ಯವ ಮೆರೆದು ಮೇಲೇರು' ಎಂದು ಹಾರೈಸಿ ಭೀಷ್ಮನೊಡನೆ ಕಳುಹಿಸುವನು.

ಕರ್ಣನು ಗುರುದಕ್ಷಿಣೆ ಏನೆಂದು ಕೇಳಲು ಪರುಶುರಾಮನು ಕರ್ಣನ ಬಳಿಬಂದು ತನ್ನ ಗುರುದಕ್ಷಿಣೆಯ ಕೇಳದೆ, ಅವನಿಗೆ ಕೆಲವು ಕೊನೆಯ ಗುರುವಾಕ್ಯವನ್ನು ಹೇಳಿ ಅವುಗಳ ಪಾಲನೆಯೇ ತನಗೆ ಗುರುದಕ್ಷಿಣೆ ಎಂದು ತಿಳಿಸಿ ಹರಸಿ ಕಳುಹಿಸಿದನು.

ಭೀಷ್ಮನೊಡಗೂಡಿ ಕರ್ಣನು ಕೌರವೇಂದ್ರನ ಆಸ್ಥಾನಕ್ಕೆ ಬರುವನು. ಕೌರವೇಂದ್ರ ಮತ್ತು ದುಶ್ಯಾಸನರು ಕರ್ಣನನ್ನು ಎದಿರುಗೊಂಡು ಅವನು ಸೂತಪುತ್ರನಾದರೂ ತಮ್ಮ ಗೆಳೆತನದ ದೋಣಿಯಲ್ಲಿ ಸ್ಥಾನಕಲ್ಪಿಸಿ, ಕೌರವೇಂದ್ರನ ಉಸಿರಲ್ಲಿ ಉಸಿರಾಗಿ ಬೆರೆತುಹೋದನು. ಇಲ್ಲಿ ವಿಪರ್ಯಾಸವೆಂದರೆ, ಕರ್ಣ ಕುಂತಿಯ ಮಗನಾದರೂ, ಕೌರವನ ಪಕ್ಷವನ್ನು ಸೇರಿ ತನ್ನ ತಮ್ಮಂದಿರಿಂದಲೇ ಹತನಾದದ್ದು, ವಿಧಿಯ ವಿಪರ್ಯಾಸವಾಗಿದೆ!

ನರಹಳ್ಳಿ ಸುಬ್ರಹ್ಮಣ್ಯರವರ ಪ್ರಕಾರ ಕುವೆಂಪು ಕಾನೀನ ನಾಟಕದಲ್ಲಿ ವಿಧಿನಿಯಮ ಹಾಗೂ ಮನುಷ್ಯ ಪ್ರಯತ್ನ ಇವುಗಳ ಸಂಘರ್ಷದ ಬಗ್ಗೆ ಹೆಚ್ಚು ಚಿಂತಿಸಿದಂತಿದೆ.

'ಮಾಯೆಯ ಪಿತೂರಿ ಲೋಕವನು ಮೂದಲಿಸಿ ಗಹಗಹಿಸಿ ನಗುತಲಿದೆ' ಎಂಬಲ್ಲಿಗೆ ಮಾಯ ಬದುಕಿನ ನಿಗೂಢತೆಯನ್ನು ತರ್ಕಕ್ಕೆ ಮೀರಿದ ಘಟನೆಗಳನ್ನು ಸಂಕೇತಿಸುವಂತಿದೆ.[೧]

ಕರ್ಣನು ಕೌರವೇಂದ್ರನ ಪಕ್ಷವನ್ನು ಭೀಷ್ಮನ, ಸಾರಥ್ಯದಲ್ಲಿ ಗುರುಗಳಾದ ಪರುಶುರಾಮರ ಆಜ್ಞೆಯಂತೆ ಸೇರುವನು. ಕರ್ಣನು ಶೂದ್ರನಾದರೂ ಅವನಿಗೆ ಕೌರವೇಂದ್ರನು ತನ್ನ ಪ್ರಾಣವೆಂದು ಬಗೆದು ಬಿಗಿದಪ್ಪಿಕೊಳ್ಳುವನು. ಈ ಸಂದರ್ಭದ ಬಗ್ಗೆ ಹೇಳುತ್ತಾ ಹಾ.ತಿ.ಕೃಷ್ಣೇಗೌಡರು, 'ಸಂಪ್ರದಾಯವು ಯೋಗ್ಯತೆಯ ಮುಂದೆ ಬಹುಕಾಲ ನಿಲ್ಲದು ಎಂಬ ತತ್ವದ ಪ್ರತಿಪಾದನೆ ಈ ನಾಟಕದ ಮುಖ್ಯ ಧ್ಯೇಯವಾಗಿದ್ದು, ಅದು ಸಫಲವಾಗಿದೆ"[೨]

ಲಿಂಗದೇವರು ಹಳೆಮನೆಯವರ ಪ್ರಕಾರ "ಕುವೆಂಪು ಕರ್ಣನ ಇಡೀ ಜೀವನದ ವಿವಿಧ ಮಜಲುಗಳನ್ನು ಇಲ್ಲಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ" ಎಂದಿದ್ದಾರೆ[೩]

**ಮೂಲಕಥೆ:** ದುರ್ವಾಸ ಮುನಿಗಳು ಕನ್ಯೆಯಾದ ಕುಂತೀದೇವಿಯು ಮಾಡಿದ ಸೇವೆಯನ್ನು ಮೆಚ್ಚಿ ಐದು ವರಗಳನ್ನು ನೀಡುವರು. ಅದರಂತೆ ಕುಂತಿದೇವಿಯು

---

೧. ನರಹಳ್ಳಿ ಬಾಲಸುಬ್ರಹ್ಮಣ್ಯ – ಕುವೆಂಪು ನಾಟಕಗಳ ಅಧ್ಯಯನ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೨, ಪು. ೧೨೯

೨. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ – ಸಂಪಾದಕರು, ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೧

೩. ಲಿಂಗದೇವರು ಹಳೆಮನೆ, ಕುವೆಂಪು ಒಂದು ಪುನರನ್ವೇಷಣೆ, ಸಂಪಾದಕ: ಡಿ.ಎಸ್.ನಾಗಭೂಷಣ, ಲೋಹಿಯಾ ಪ್ರಕಾಶನ, ಬಳ್ಳಾರಿ, ಪುಟ. ೧೯೪

ಬಾಲ್ಯ ಸಹಜವಾದ ಹುಡುಕಾಟದಿಂದ, ಮುನಿಗಳ ವರವನ್ನು ಪರೀಕ್ಷಿಸಿ ಸೂರ್ಯದೇವನಿಂದ ಕರ್ಣನನ್ನು ಪಡೆದಳು. ನಂತರ ಲೋಕಾಪವಾದಕ್ಕೆ ಹೆದರಿದ ಕುಂತಿದೇವಿಯು ಮಗುವನ್ನು ನದಿಯಲ್ಲಿ ತೇಲಿಬಿಡುತ್ತಾಳೆ. ಮೊಗುವು ಸೂತ ಮತ್ತು ರಾಧೇಯ ದಂಪತಿಗಳ ಪಾಲನೆಯಲ್ಲಿ ಬೆಳೆಯುತ್ತದೆ.

ಬಾಲಕನಾದ ರಾಧೇಯನು ಬಿಲ್ವಿದ್ಯೆಯನ್ನು ಕಲಿಯಲು ಗುರುಗಳಾದ ಪರುಶುರಾಮನಲ್ಲಿಗೆ ಬರುವನು. ಗುರುವಿನ ಬಳಿ ತಾನು ಬ್ರಾಹ್ಮಣ ಕುಲಕ್ಕೆ ಸೇರಿದವನೆಂದು ಸುಳ್ಳುಹೇಳಿ ವಿದ್ಯಾಭ್ಯಾಸ-ವನ್ನು ಅವರ ಬಳಿ ಮಾಡುತ್ತಿದ್ದನು. ಒಮ್ಮೆ ಗುರುಗಳಾದ ಪರುಶುರಾಮನು ಆಯಾಸ ಪರಿಹಾರ್ಥವಾಗಿ ತನ್ನ ಶಿಷ್ಯನಾದ ಕರ್ಣನ ತೊಡೆಯ ಮೇಲೆ ವಿಶ್ರಮಿಸಿಕೊಳ್ಳುವನು. ಹಾಗೆ ನಿದ್ರೆಗೆ ಜಾರುವನು.

ಈ ಸಮಯಕ್ಕೆ ವಜ್ರದುಂಬಿಯೊಂದು ಬಂದು ಕರ್ಣನ ತೊಡೆಯನ್ನು ಕೊರೆಯುವುದು, ಗುರುಗಳ ನಿದ್ರೆಗೆ ಭಂಗವಾಗುತ್ತದೆಂದು ಬಗೆದು ಕರ್ಣನು ಅದನ್ನು ಸಹಿಸಿಕೊಳ್ಳುವನು. ನಂತರ ನಿದ್ರೆಯಿಂದ ಎಚ್ಚರವಾದ ಪರುಶುರಾಮನು ಕರ್ಣನ ರಕ್ತಮಯ ಸ್ಥಿತಿಯನ್ನು ನೋಡಿ, ಈ ಬಗೆಯ ದೈಹಿಕ ವ್ರಣವನ್ನು ಸಹಿಸಿಕೊಳ್ಳಲು ಕ್ಷತ್ರಿಯರಿಗೆ ಮಾತ್ರ ಸಾಧ್ಯ ಎಂದು ಬಗೆದು, ಕರ್ಣನಿಗೆ ತನ್ನಿಂದ ಕರಗತವಾದ ವಿದ್ಯೆಯು ಅವನ ಕೊನೆಗಾಲದಲ್ಲಿ ಉಪಯೋಗಕ್ಕೆ ಬಾರದಂತಾಗಲಿ ಎಂದು ಶಾಪವನ್ನು ನೀಡುತ್ತಾನೆ. ನಂತರ ಕರ್ಣನು ಗುರುಗಳಿಂದ ತಿರಸ್ಕೃತನಾಗಿ ಕೌರವೇಂದ್ರನ ಸ್ನೇಹವನ್ನು ಬೆಳೆಸಿ ಕೌರವರ ಪಡೆಯಲ್ಲಿ ಸೇರಿಕೊಂಡನು.

**ಬದಲಾವಣೆಯ ಅಂಶಗಳು:** ಕಾನೀನ ನಾಟಕವು ಕುವೆಂಪುರವರ ಕೊನೆಯ ನಾಟಕವಾಗಿದ್ದು, ಇದು ಕರ್ಣನನ್ನು ಕೇಂದ್ರವಾಗಿಟ್ಟುಕೊಂಡು ಬರೆದ ನಾಟಕವಾಗಿದೆ. ಇದನ್ನು ಕುವೆಂಪುರವರು ೧೯೭೪ರಲ್ಲಿ ಬರೆದರು.

ಈ ನಾಟಕವು ವಿಧಿವಾಣಿಯಿಂದ ಪ್ರಾರಂಭವಾಗುತ್ತದೆ. ಕುಂತಿದೇವಿ ಸೂರ್ಯನಿಂದ ಮಗುವನ್ನು ವರಪ್ರಸಾದವಾಗಿ ಪಡೆದು ಲೋಕಾಪವಾದಕ್ಕೆ ಹೆದರಿ ಮಗುವಿನೊಡನೆ ತಾನೂ ಗಂಗಾನದಿಗೆ ಹಾರಲು ಸಿದ್ದವಾಗುತ್ತಾಳೆ. ಗಂಗಾದೇವಿಯು ಕುಂತಿಯ ಆತ್ಮಹತ್ಯೆ ಪ್ರಯತ್ನವನ್ನು ತಡೆದು ಸೂತ ರಾಧೇಯ ದಂಪತಿಗಳಿಗೆ ಅದನ್ನು ದೊರೆಯುವಂತೆ ಮಾಡುತ್ತಾಳೆ. ಇದು ಕುವೆಂಪುರವರು ಮಾಡಿರುವ ಬದಲಾವಣೆ-ಯಾಗಿದೆ. ಮೂಲದಲ್ಲಿ ಇಂತಹ ಸನ್ನಿವೇಶವಿಲ್ಲ, ಕುಂತಿದೇವಿ ಮಗುವನ್ನು ನದಿಯಲ್ಲಿ ಬಿಟ್ಟು ತೆರಳುತ್ತಾಳೆ.

ಕರ್ಣನು ವಿದ್ಯಾಭ್ಯಾಸಕ್ಕಾಗಿ ಗುರುಗಳಾದ ಪರುಶುರಾಮನನ್ನು ಅರಸುತ್ತಾ ತೆರಳುವಾಗ, ಅವರನ್ನು ಸಂಧಿಸಿ ತಾನು ಸೂತಪುತ್ರನೆಂದು, ಬೆಸ್ತರ ಕುಲದವನೆಂದು

ಮೊದಲೇ ತಿಳಿಸಿ ವಿದ್ಯೆಯನ್ನು ಕಲಿಯುತ್ತಾನೆ. ಮೂಲದಲ್ಲಿದ್ದಂತೆ ಸುಳ್ಳು ಹೇಳಿ ವಿದ್ಯೆ ಕಲಿಯುವುದಿಲ್ಲ. ಇಲ್ಲಿ ಕರ್ಣನನ್ನು ಪ್ರಾಮಾಣಿಕ, ಸತ್ಯಸಂದನನ್ನಾಗಿ ಮಾಡುತ್ತಾನೆ.

ಪರುಶುರಾಮನ ಪ್ರಸಂಗದಲ್ಲಿ ಕುವೆಂಪು ಮಾಡಿರುವ ಮತ್ತೊಂದು ಬದಲಾವಣೆಯೆಂದರೆ, ಇಲ್ಲಿ ಪರುಶುರಾಮನು ಕರ್ಣನಿಗೆ ಶಾಪ ನೀಡದೆ ಹರಸಿ ಕಳುಹಿಸುತ್ತಾನೆ. ಅದೇ ರೀತಿ ಕೆಲವು ನೀತಿ ಮಾತುಗಳನ್ನು ಹೇಳಿ ಅವುಗಳ ಪಾಲನೆಯೇ 'ನನಗೆ ನೀ ನೀಡುವ ಗುರುದಕ್ಷಿಣೆ' ಎಂದು ತಿಳಿಸುವನು.

ಕರ್ಣನನ್ನು ಭೀಷ್ಮನೊಂದಿಗೆ ಕಳುಹಿಸುವಾಗ 'ಗಾಂಗೇಯ, ಈ ವೀರಬಾಲಕನನ್ನು ಸಾಮಾನ್ಯನಂದರಿಯಬೇಡ, ನೀನೊಂದು ವರ್ಷದಲ್ಲಿ ಕಲಿತಿದ್ದನ್ನು ಇವನ್ನೊಂದು ತಿಂಗಳಲಿ ಅರಿತಿಹನು' ಎಂದು ಹೇಳುವ ಮೂಲಕ ಕುವೆಂಪು ಪರುಶುರಾಮನ ಮೂಲಕ ಕರ್ಣನ ಪಾತ್ರವನ್ನು ಉಜ್ಜವಲಗೊಳಿಸಿದ್ದಾರೆ. ಇವುಗಳ ಜೊತೆಗೆ ಗಂಗಾಮಾತೆ, ಸೂತ-ರಾಧೆ ದಂಪತಿಗಳ ಸಂವಾದ, ಕರ್ಣರಾಧೆಯರ ಸಂವಾದ, ಮೀನಿನ ಬಲೆಯಲ್ಲಿ ಬಿಲ್ಲು ಬಾಣಗಳು ಸಿಗುವುದು, ಮೂವರು ಬ್ರಹ್ಮಚಾರಿಗಳು ಮತ್ತು ಕರ್ಣ ಸಂವಾದ, ಹುಲಿಯ ದವಡೆಯಿಂದ ಬ್ರಹ್ಮಚಾರಿಗಳನ್ನು ರಕ್ಷಿಸಿದ್ದು, ಮರದ ಕೊಂಬೆಯಲ್ಲಿದ್ದ ಕೆಂಪು ಹೂವನ್ನು ಬಿಲ್ವಿದ್ಯೆಯಿಂದ ಕತ್ತರಿಸುವುದು, ಎಸೆದ ಕಲ್ಲನ್ನು ಮಾರ್ಗಮಧ್ಯದಲ್ಲೇ ಪುಡಿಮಾಡಿದ್ದು, ಕರ್ಣನನ್ನು ಆಶ್ರಮದಿಂದ ಬೀಳ್ಕೊಡುವಾಗ ಅನಿರೀಕ್ಷಿತವಾಗಿ ಭೀಷ್ಮನ ಆಗಮನ ಮುಂತಾದ ವೈವಿಧ್ಯಮಯವಾದ ಸನ್ನಿವೇಶ, ಪಾತ್ರಚಿತ್ರಣಗಳನ್ನು ಕುವೆಂಪು ಬಳಸಿ ಕಾನೀನ ನಾಟಕದಲ್ಲಿ ಕರ್ಣನನ್ನು ಗುಣಗಳ ಗಣಿಯನ್ನಾಗಿಸಿದ್ದಾರೆ.

**'ಕಾನೀನ' ನಾಟಕದಲ್ಲಿ ಬದಲಾವಣೆಯ ಪ್ರಸಂಗಗಳು**

ಕಾನೀನ ನಾಟಕವನ್ನು ಕುವೆಂಪುರವರು ವಿಧಿವಾಣಿಯಿಂದಲೇ ಪ್ರಾರಂಭಿಸಿದ್ದಾರೆ.

ಕಾಲ ದೇವಿಯ ಗರ್ಭದಲ್ಲಿ ಮಹಾಭಾರತವು
ಮೆಲುಮೆಲನೆ ಬೆಳೆದು ಮೈಗೊಂಡು ಮೊಳೆದೋರುತಿದೆ
ಆ ಕುರುಕ್ಷೇತ್ರದಲಿ ಬಲಿದಾನವಾಗಲಿಹ
ಯಜ್ಞಪಶುಗಳ ಬಲಿಗೆ ಸನ್ನಾಹ ನಡೆಯುತಿದೆ
ದುಷ್ಟ ಶಿಕ್ಷೆಗೆ, ಶಿಷ್ಟರಕ್ಷಣೆಗೆ, ಶ್ರೀಹರಿಯು
ಕೃಷ್ಣಭಿಧಾನದಲಿ ಮೂಡುವನು ಧರೆಯಲ್ಲಿ.
ಮಂಗಳ ಗಭೀರ ಭೀಕರ ತೂರ್ಯಸ್ವನವದೋ
ಕಂಪಿಸುತ ವಿಶ್ವವನು, ಬ್ರಹ್ಮಾಂಡದೆದೆಯಿಂದ
ಮೊಳಗುತಿದೆ, ವ್ಯಕ್ತ ಅವ್ಯಕ್ತಗಳ ಸಂಗಮದ

ಎದೆಯಲ್ಲಿ, ನೋಡದೋ ಮಾಯೆಯ ಪಿತೂರಿ
ಲೋಕವನು ಮೂದಲಿಸಿ ಗಹಗಹಿಸಿ ನಗುತಲಿದೆ

ಹೀಗೆ ಕಾಲನ ಗರ್ಭದಲ್ಲಿ ಭವಿಷ್ಯದಲ್ಲಿ ಜರುಗಲಿರುವ ಮಹಾಸಂಗ್ರಾಮಕ್ಕೆ ಮುನ್ನುಡಿಯನ್ನು ಬರೆದಂತೆ ಈ ವಿಧಿವಾಣಿಯಿಂದಲೇ ನಾಟಕಕ್ಕೆ ಚಾಲನೆಯನ್ನು ನೀಡಿದ್ದಾರೆ. ಆ ಮೂಲಕ ವಿಧಿಯಾಟದಲ್ಲಿ ಅವ್ಯಕ್ತ ಶಕ್ತಿಯ ನಿಯಂತ್ರಣವನ್ನು ತಮ್ಮ ಈ ನಾಟಕದಲ್ಲಿ ತೋರಿಸಿದ್ದಾರೆ.

ಕುಂತಿದೇವಿಯು ಸೂರ್ಯದೇವನಿಂದ ಮಗುವನ್ನು ಪಡೆದು ಲೋಕಾಪವಾದಕ್ಕೆ ಹೆದರಿ ಮಗುವಿನೊನೊಡನೆ ಗಂಗಾನದಿಯಲ್ಲಿ ಐಕ್ಯವಾಗಲು ಸಿದ್ಧಳಾದಾಗ ಗಂಗಾದೇವಿಯು ಕುಂತಿಯ ಆತ್ಮಹತ್ಯಾ ಪ್ರಯತ್ನವನ್ನು ತಡೆದು ಹೀಗೆ ಹೇಳುವಳು.

ನಿನ್ನ ಕಂದನನೆನಗೆ ಕೆಯ್ಯುಡೆಯಾಗಿ ಕೊಡು;
ನಾನೀತನನ್ನು ಸಾಕಿ; ಸಲಹುವಂತೆಸಗುವೆನು
(ಮುಂದುವರೆದು).............
ನೀನು ಮಾಡುವುದೇನು, ಕುಂತಿ? ವಿಧಿ ಲೀಲೆಯಿದು?
ಮುಂದೆ ಬರುವಾ ಮಹಾಭಾರತದ ನಾಟಕಕೆ
ನಾಂದಿಯನು ಬರೆಯುತಿದೆ ಬಿದಿ. ನಾವೆಲ್ಲ
ಸೂತ್ರಧಾರನ ಕೈಲಿ ಬೊಂಬೆಗಳು, ಪಾತ್ರಗಳ ವಹಿಸುವರು.
ಕುಣಿಸಿದಂತೆಯೆ, ಕುಣಿಯುತಿರುವೆವು.

ಎಂದು ಗಂಗಾದೇವಿಯೇ ಕುಂತಿದೇವಿಗೆ ತಿಳಿಸಿ ಮಗುವನು ಇಲ್ಲಿಟ್ಟು ಹೋಗು– 'ಮಿಂಗುಲಿಗಲ್ಲಿಯೇ ಬರುತಿಹನು ಸೂತನು ಈತನನ್ನು ಕಂಡು ಕೊಂಡೊಯ್ಯುವನು' ಎಂಬುದಾಗಿ ಸಂತೈಸಿ ಕಳುಹಿಸುವಳು. ಇಲ್ಲಿ ಕುವೆಂಪುರವರು ಗಂಗಾದೇವಿಯ ಪಾತ್ರವನ್ನು ಸೃಷ್ಟಿಸಿ ಅವಳಿಂದಲೇ 'ನಾವೆಲ್ಲಾ ಸೂತ್ರದ ಗೊಂಬೆಗಳು' ಎಂಬುದನ್ನು ಮನದಟ್ಟು ಮಾಡಿದ್ದಾರೆ.

ಕುವೆಂಪುರವರ ಮತ್ತೊಂದು ದೊಡ್ಡ ಬದಲಾವಣೆಯ ಪ್ರಸಂಗವನ್ನು, ಪರುಶುರಾಮನ ಪಾತ್ರದಲ್ಲಿ ನೋಡಬಹುದು. ಇಲ್ಲಿನ ಪರುಶುರಾಮ ಮೂಲ–ದಂತಹವನಲ್ಲ. ಪರುಶುರಾಮನಿಗೆ ಕರ್ಣನು ತಾನು ರಾಧೇಯನೆಂದೂ, ಬೆಸ್ತರ ಕುಲ–ದವನೆಂದೂ, ಪ್ರಾರಂಭದಲ್ಲಿ ಪ್ರಾಮಾಣಿಕತೆಯಿಂದ, ಸತ್ಯವನ್ನು ಹೇಳಿ ಪರುಶುರಾಮನಿಗೆ ತಿಳಿಸಿ ಅವನ ಶಿಷ್ಯನಾಗುತ್ತಾನೆ. ಇಲ್ಲಿ ಮೂಲದಂತೆ ಪರುಶುರಾಮನು ಕರ್ಣನನ್ನು ಶಿಷ್ಯನನ್ನಾಗಿ ತಿರಸ್ಕರಿಸದೆ ಸ್ವೀಕರಿಸುತ್ತಾನೆ. ಇಲ್ಲಿ ವಿದ್ಯೆಗೆ ಕೇವಲ, ಕುಲ ಜಾತಿಯನ್ನು

ವರ್ಜಿಸಿ, ಪ್ರತಿಭೆ, ಯೋಗ್ಯತೆ, ಆಸಕ್ತಿಗಳೇ ವಿದ್ಯೆಯ ಮಾನದಂಡವನ್ನಾಗಿ ಪರುಶುರಾಮನು ಸ್ವೀಕರಿಸಿದ್ದಾನೆ.

ಪರುಶುರಾಮ: ವಟುಗಳಿರಾ, ಯಾವಾತನ ಮೊಗದಲ್ಲಿ ತೇಜಸ್ಸು
ತೋರುವುದೋ, ಯಾವನೊಳು ಬಾಂದಳದ ಗಾಂಭೀರ್ಯ
ಮೆರೆವುದೊ, ಯಾವನು ಸದಾ ಸತ್ಯವಾಡುವನೊ
ಅವನಲ್ಲಿಯೆ ಇರಲಿ, ಅವನಾರೆ ಆಗಿರಲಿ
ಬ್ರಾಹ್ಮಣನು ಎಲ್ಲಿ ಔದಾರ್ಯವಿರುವುದೊ
ಎಲ್ಲಿ ಸಾಮರ್ಥ್ಯ ಮೈದೋರುವುದೊ, ಮೇಣೆಲ್ಲಿ
ವೀರರಸ ಉಕ್ಕುವುದೊ ಅವರೆಲ್ಲ ಕ್ಷತ್ರಿಯರು
ರಾಧೇಯ ನಿನ್ನ ಸಾಮರ್ಥ್ಯಕ್ಕೆ ಮೆಚ್ಚಿದೆನು.
ನಾನರಿತ ವಿದ್ಯೆಯನು ನಿನಗೆ ಸಂತಸದಿಂದ
ಬೋಧಿಸುವೆ, ಸಂಪ್ರದಾಯವು ಯೋಗ್ಯತೆಯ ಮುಂದೆ
ಬಹುಕಾಲ ನಿಲ್ಲಲರಿಯದು, ಒಳಗಿಹ ಬೆಳಕು
ಹೊಳೆಯ ತೊಡಗಿದರೆ ಹೊರಗಿರುವ ಕತ್ತಲೆಯು
ತಡೆಯಲಾರದು, ಅದನು, ನಿನ್ನ ಕಣ್ಣಿನ ಬೆಳಕೆ
ನಿನ್ನ ಕುಲವನು ಬಿಚ್ಚಿ ಹೇಳುತಿದೆ, ಮುಂದೆಂದೂ
ರಾಧೇಯನೆಂಬುವನು ಪರುಶುರಾಮನ ಶಿಷ್ಯ

ಈ ಭಾಗದಲ್ಲಿ ಕರ್ಣ ಮತ್ತು ಪರುಶುರಾಮರು ಇಬ್ಬರೂ ನೇರ ಸ್ವಭಾವವುಳ್ಳವರಾಗಿದ್ದು ಗುರು ಮತ್ತು ಶಿಷ್ಯ ತಮ್ಮ ಸ್ವೀಕಾರತ್ವವನ್ನು ಘಂಟಾಘೋಷವಾಗಿ ತಿಳಿಸಿದ್ದಾರೆ.

ಕರ್ಣನು ಮೂಲದಲ್ಲಿ ಪರುಶುರಾಮನಿಂದ ಶಾಪಕ್ಕೆ ಗುರಿಯಾಗುತ್ತಾನೆ. ಆದರೆ ಇಲ್ಲಿ ಪರುಶುರಾಮನು ಕರ್ಣನಿಗೆ ಶಾಪ ನೀಡದೆ ಹರಸಿಕಳುಹಿಸುವನು. ಗುರುವಿಗೆ ಗುರುದಕ್ಷಿಣೆಯನ್ನು ನೀಡಲು ಹೋದಾಗ

ಪರುಶುರಾಮ: ನನ್ನಿಯ ನಳಿಯಬೇಡ; ಸಲಹಿದೊಡೆಯಗೆ ಮರಳಿ
ದ್ರೋಹವನೆಣಿಸಬೇಡ; ದೀನರನು ತುಳಿಯದಿರು
ಧೂರ್ತರಿಗೆ ಮಣಿಯದಿರು ಕಾಳಗದೊಳಿರುವಾಗ
ಧರ್ಮಯುದ್ಧವನೆಂದೂ ನೀಗದಿರು, ಅರಿಗಳಿಗೆ
ಮೈಸೋತು ಹಿಮ್ಮೆಟ್ಟದಿರು, ಸಿಂಹದೊಲುಬಾಳು
ಅದುವೆ ನೀನೆನಗೀವ ಗುರುದಕ್ಷಿಣೆ

ಎಂದು ನೀತಿಯನ್ನು ಹೇಳಿ ಈ ನೀತಿ ಮಾತುಗಳ ಪರಿಪಾಲನೆಯೇ 'ನೀನನಗೆ ನೀಡುವ ಗುರುದಕ್ಷಿಣೆ' ಎಂದು ಪರುಶುರಾಮನಿಗೆ 'ಧರ್ಮದಿಂದ ನಡೆ, ಧರ್ಮದಿಂದ ಬಾಳು, ಧರ್ಮವನ್ನೇ ಎತ್ತುಹಿಡಿ' ಎಂಬ ಮಂತ್ರವನ್ನು ಬೋಧಿಸಿ, ಹರಸಿ, ಭೀಷ್ಮನ ಜೊತೆ ಕಳುಹಿಸುವನು. ಕರ್ಣನು ತನ್ನ ಜೀವನದಲ್ಲಿ ಇವನ್ನು ಪಾಲಿಸುತ್ತಾ ಎಂದನು. ತನ್ನ ಗುರುವಿನ ಮಾತನ್ನು ಉಳಿಸಿದನು. ಇಲ್ಲಿ ಸನ್ನಿವೇಶಗಳಿಂದಾಗಿ ಕರ್ಣನು ಗುಣಗಳು, ತೋರಿದ ನಡವಳಿಕೆಗಳನ್ನು ಕುವೆಂಪುರವರು ಈ ನಾಟಕದಲ್ಲಿ ಪರುಶುರಾಮನ ನೀತಿವಾಕ್ಯವನ್ನಾಗಿಸಿ ಕರ್ಣನ ಶ್ರೇಷ್ಠ ಪರಂಪರೆಯನ್ನು ಎತ್ತಿ-ಹಿಡಿದಿದ್ದಾರೆ.

ಪರುಶುರಾಮನು ಕರ್ಣನನ್ನು ಚಾಪಾಗಮ ಕೋವಿದನಾಗಿಮಾಡಿ ಅವನನ್ನು ಬೀಳ್ಕೊಡುವ ಸಂದರ್ಭದಲ್ಲಿ ಅವನ ಹಿರಿಯ ಶಿಷ್ಯನಾದ ಭೀಷ್ಮನು ಗುರುವನ್ನು ಕಾಣಲುಬಂದು, ಪರುಶುರಾಮನ ಆಜ್ಞೆಯ ಮೇರೆಗೆ, ಆತನನ್ನು ತನ್ನ ಜೊತೆಯಲ್ಲಿ ಕೊಂಡೊಯ್ಯುವನು. ನಂತರ ಪರುಶುರಾಮನು ತನ್ನ ಪ್ರಿಯಶಿಷ್ಯ ಕರ್ಣನ ಬಗ್ಗೆ ಹೇಳುತ್ತಾ, ಗಾಂಗೇಯನಿಗೆ,

ಗಾಂಗೇಯ, ಈ ವೀರ ಬಾಲಕನು ಸಾಮಾನ್ಯ
ನೆಂದರಿಯಬೇಡ, ನೀನೊಂದು ವರ್ಷದಲಿ
ಕಲಿತುದನು ಇವನೊಂದು ತಿಂಗಳಲಿ ಅರಿತಿಹನು
ಜಾತಿಯಲಿ ಸೂತಜನು
ಗುಣದಲ್ಲಿ ಕ್ಷತ್ರಿಯನು, ಇವನೆನ್ನ ಶಿಷ್ಯ
ರಾಧೇಯ ನೆಂಬುವನು
ಶಸ್ತ್ರವಿದ್ಯೆಯೊಳೀತನ್
ಅಪ್ರತಿಮನಾಗಿಹನು ಈತನನು ನೀನು
ಗಜಪುರಿಗೆ ಕೊಂಡೊಯ್ದು ಸಲಹಿದರೆ ಮುಂದೆ
ನಿಮ್ಮ ರಾಜ್ಯದ ಬಲಕೆ ಬಲದ ಕೈಯಾಗುವನು

ಈ ಮಾತುಗಳ ಮೂಲಕ ಪರುಶುರಾಮನು ಕರ್ಣನ ಬಿಲ್ವಿದ್ಯೆ, ಪ್ರತಿಭೆ, ವೀರತ್ವ ಮುಂತಾದ ಗುಣಗಳನ್ನು ತಿಳಿಸಿ, ಅವನಲ್ಲಿರುವ ಸ್ವಾಮಿಭಕ್ತಿ, ನಿಷ್ಠೆ, ಪ್ರಾಮಾಣಿಕತೆ ಮುಂತಾದ ಸದ್ಗುಣಗಳಿಂದ ಶೋಭಿತನಾಗಿರುವ ಕರ್ಣನಿಗೆ ಆಶ್ರಯದ ಕೊರತೆ ಇದ್ದು, ಅದನ್ನು ನೀಡಿ ಸಲುಹಿದರೆ ಗಜಪುರಿಗೆ ಗಜನಂತಾಗುವನು ಎಂಬುದನ್ನು ಭೀಷ್ಮನಿಗೆ ಪರೋಕ್ಷವಾಗಿ ತಿಳಿಸಿದ್ದಾನೆ.

ಒಟ್ಟಿನಲ್ಲಿ ಹೇಳುವುದಾದರೆ, ಕುವೆಂಪುರವರು ಮಹಾಭಾರತದ ಕರ್ಣನಿಗೆ ತಮ್ಮ ಕಾನೀನ ನಾಟಕದಲ್ಲಿ ಉಜ್ವಲವಾದ ವ್ಯಕ್ತಿತ್ವವನ್ನು ನೀಡಿದ್ದಾರೆ. ಕನ್ನಡದಲ್ಲಿ ಮೊದಲು ಮಹಾಭಾರತವನ್ನು ಬರೆದ ಪಂಪನು ಕರ್ಣನ ಪಾತ್ರದಿಂದಾಗಿ ಆಕರ್ಷಿತನಾಗಿ ಆ ಪಾತ್ರದ ಸಂಕೀರ್ಣತೆಗೆ ಸೋತು, 'ನೆನೆಯದಿರಣ್ಣ ಭಾರತದೊಳಿಂಪೆರರಾರು ಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ' ಎಂದು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ತಿಳಿಸಿದ್ದಾನೆ.[೧]

ಪಂಪನ ಈ ಮಾತುಗಳಿಂದ ಪ್ರೇರಣೆಗೊಂಡ ಕುವೆಂಪು ಕರ್ಣನ ಸ್ಥಾನವನ್ನು ಉಜ್ವಲಗೊಳಿಸಿದ್ದಾರೆ. ಅದೇ ರೀತಿ ಪರುಶುರಾಮನಂತಹ ದೈವೀಪುರುಷನಿಗೆ ಮೂಲದಲ್ಲಿ ಶ್ರೀರಾಮ, ದ್ರೋಣರಂತೆ ಉಂಟಾಗಿದ್ದ ಅಪವಾದವನ್ನು ತಮ್ಮ ಕಾನೀನ ನಾಟಕದಲ್ಲಿ ಕರ್ಣನನ್ನು ಶಿಷ್ಯನನ್ನಾಗಿ ಸ್ವೀಕರಿಸಿ, ಹರಿಸಿ ಕಳುಹಿಸುವ ಸನ್ನಿವೇಶಗಳ ಮೂಲಕ ಪರುಶುರಾಮನ ವ್ಯಕ್ತಿತ್ವಕ್ಕೆ ಪಾತ್ರಕ್ಕೆ ಅಂಟಿದ್ದ ಕೊಳೆಯನ್ನು ತೊಳೆದಿದ್ದಾರೆ. ಇವುಗಳು ಕುವೆಂಪುದವರಲ್ಲಿದ್ದ ಸಮಾಜವಾದ, ಸಮತಾವಾದ, ನ್ಯಾಯವಾದಗಳ ಪ್ರತಿಪಾದಕರನ್ನಾಗಿ ಮಾಡಿದೆ.

ವಿದ್ಯೆ ಎಂಬುದು ಕೇವಲ ಮೇಲುವರ್ಗಕ್ಕೆ ಸೀಮಿತವಾಗಿಲ್ಲ. ಅದು ಜಾತಿ, ಕುಲಗಳ ಮಾನದಂಡವಲ್ಲ. ಅದು ಪ್ರತಿಭೆ, ಯೋಗ್ಯತೆ, ಪ್ರಾಮಾಣಿಕತೆಯ, ಮಾನದಂಡ ಎಂಬುದನ್ನು ತಮ್ಮ ಸಮಾಜವಾದದ ಕಲ್ಪನೆಯಲ್ಲಿ ನಿರೂಪಿಸಿದ್ದಾರೆ.

ಹುಟ್ಟಿನಿಂದ ಯಾರೂ ಬ್ರಾಹ್ಮಣರಲ್ಲ, ಅವರಲ್ಲಿರುವ ಗುಣಗಳಿಂದ ಅವರು ಬ್ರಾಹ್ಮಣರೋ, ಶೂದ್ರರೋ? ಎಂಬುದು ನಿರ್ಧಾರವಾಗುತ್ತದೆ ಎಂಬುದನ್ನು ಕರ್ಣನನ್ನು ಪರುಶುರಾಮ ಶಿಷ್ಯನನ್ನಾಗಿ ಸ್ವೀಕರಿಸುವಾಗ ಹೇಳುವ ಸಂದರ್ಭದಲ್ಲಿ ಕುವೆಂಪುರವರ ಜಾತ್ಯಾತೀತ ನಿಲುವನ್ನು ನೋಡಬಹುದು.

---

೧. ನರಹಳ್ಳಿ ಬಾಲಸುಬ್ರಹ್ಮಣ್ಯ – ಕುವೆಂಪು ನಾಟಕಗಳ ಅಧ್ಯಯನ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೨, ಪು. ೧೩೦

# ಅಧ್ಯಾಯ - ೪

# ಪುರಾಣ ಪಾತ್ರಗಳಿಗೆ ವೈಚಾರಿಕ ಸ್ವರೂಪ

ಕುವೆಂಪುರವರ ನಾಟಕಗಳು ಇಂದಿಗೂ ಜೀವಂತವಾಗಿರುವುದಕ್ಕೆ ಅವರು ತಮ್ಮ ನಾಟಕದಲ್ಲಿ ಪಾತ್ರಗಳಿಗೆ ನೀಡಿರುವ ವೈಚಾರಿಕತೆಯ ಲೇಪನವೇ ಕಾರಣವಾಗಿದೆ. ಆದ್ದರಿಂದಾಗಿ ಈ ನಾಟಕಗಳು ಸರ್ವಕಾಲಿಕ ಸತ್ಯವನ್ನು ಸಾರಿ ತಮ್ಮದೇ ಆದ ಮೌಲ್ಯಗಳನ್ನು ಉಳಿಸಿಕೊಂಡಿವೆ. ಯಮನಸೋಲು ನಾಟಕದಲ್ಲಿ ಸಾವಿತ್ರಿಯು ತನ್ನ ಪತಿ ಅಲ್ಪಾಯು ಎಂದು ತಿಳಿದಿದ್ದರೂ ಅವನ ಶುಚಿಶೀಲಕ್ಕೆ ಮನಸೋತು ಮದುವೆಯಾದದ್ದು, ಇಲ್ಲಿ ಪತಿಯ ಆಯುಷ್ಯದ ಬಗ್ಗೆ ತಿಳಿದ್ದರೂ ಅವಳ ಅಚಲ ನಿರ್ಧಾರಿತ ಶಕ್ತಿಯನ್ನು, ತೀರ್ಮಾನವನ್ನು ಕಾಣಬಹುದು. ನಾಟಕದಲ್ಲಿ ಹೊಸತನ ಎದ್ದುಕಾಣುವುದು 'ಬುದ್ದಿಯರಿಯದ ಎಷ್ಟೋ ತತ್ವಗಳನಾತ್ಮ ಸಿದ್ದಿಯಿಂದರಿತಿಹುದು' ಎಂಬ ಮಾತಿನಲ್ಲಿ ಕಂಡುಬರುತ್ತದೆ. ಯಮನು ಸತ್ಯವಾನನ ಪ್ರಾಣಹರಣಕ್ಕೆಂದು ಬಂದಾಗ ಸಾವಿತ್ರಿಯು ತನ್ನ ಮೇಲಿನ ಕರುಣೆಯಿಂದ ತನ್ನ ಪತಿಯನ್ನು ಉಳಿಸುವಂತೆ ಬೇಡುವುದರ ಮೂಲಕ ಯಮನ ಕಠೋರ ನಿಯಮವನ್ನು ಸಡಿಲಿಸುವಂತೆ ಮಾಡಿದ್ದಾಳೆ. ಯಮನು ಸತ್ಯವಾನನ ಪ್ರಾಣ ತೆಗೆಯಲು ಬಂದಾಗ ಸಾವಿತ್ರಿಯು ಯಮನನ್ನು ಕುರಿತು 'ಧರ್ಮವೊಲವಿಗೆ ಶರಣು ಎಂದು ನೀನರಿತಾಗ ನನ್ನನಿಯನನ್ನನಗೆ ಹಿಂದಕೊಪ್ಪಿಸಬೇಕು' ಎಂದು ಹೇಳುವಲ್ಲಿ ಸಾವಿತ್ರಿಯ ದೃಢ ವಿಶ್ವಾಸವನ್ನು, ಛಲವನ್ನು ಕಾಣಬಹುದು. ಯಮನು ಸತ್ಯವಾನನ ಪ್ರಾಣವನ್ನು ಕೊಂಡೊಯ್ಯುವಾಗ ಯಮನನ್ನು ಸಾವಿತ್ರಿ ಹಿಂಬಾಲಿಸುವಳು. ಅದಕ್ಕೆ ಕಾರಣವನ್ನು ಕೇಳಲು, 'ಸತ್ತಪತಿಯರ ಹಿಂದೆ ಹೋಗುವುದು ಪತಿವ್ರತಾ ರಮಣಿಯರ ಧರ್ಮ, ಒಲಿದೆದೆಗಳೆರಡೂ ಎಂದಿಗೂ ಅಗಲಲಾರವು. ಅದಕ್ಕೆ ಹಿಂಬಾಲಿಸುತಿಹೆ ಪತಿಯ ನಿನ್ನ ಧರ್ಮವ ನೀನು ಮಾಡು, ಹೇ ಧರ್ಮ ನನ್ನ ಧರ್ಮವ ನಾನು ಮಾಡುವೆನು' ಎಂಬುವಲ್ಲಿ ಅವಳ ಪತಿಭಕ್ತಿ, ಪತಿವ್ರತಾ ಧರ್ಮಪಾಲನೆಯಪರಿ, ಇಲ್ಲಿ ಕುವೆಂಪು ಭಾರತೀಯ ನಾರಿಯಿಂದ ಭಾರತೀಯ ಸಂಸ್ಕೃತಿಯನ್ನು ಪರಿಚಯಿಸಿ ಶ್ರೀಮಂತಗೊಳಿಸಿದ್ದಾರೆ. ಸಾವಿತ್ರಿಯ ಪತಿಭಕ್ತಿಗೆ ಸೋತಯಮನು "ತಥಾಸ್ತು! ಎಲೆತಾಯೆ, ನಿನ್ನೊಲುಮೆ ಮೃತ್ಯುವನು ಜಯಿಸಿತಿಂದು! ಧರ್ಮವೊಲವಿಗೆ ಮಣಿದು ಶರಣಾಯಿತಿಂದು। ನಿಯಮವನುರಾಗಕ್ಕೆ ಮೈಸೋತಿತಿಂದು, ಮಿರ್ತುವನು ಎದೆಯೊಲವು ಗೆದ್ದಿತಲೆತಾಯೆ। ನಿನ್ನನಿಯನನ್ನಿಗೋ ಕೊಟ್ಟಿಹೆನು, ತೆರಳು ಸುಖವಾಗಿ ಬಾಳು" ಎಂದು ಯಮನು ಸಾವಿತ್ರಿಯ ಪತಿಭಕ್ತಿ, ಪ್ರೀತಿಗೆ, ಸೋತು ಹರಸಿ ಕಳುಹಿಸಿದನು. "ಪ್ರೀತಿ,

ಪ್ರೇಮ ಇವುಗಳಿಂದ ಸಾವನ್ನು ಗೆಲ್ಲಬಹುದು, ಇವು ಜಗತ್ತಿನಲ್ಲಿ ಅಮರವಾಗಿರುತ್ತವೆ ಎಂಬ ತತ್ವವನ್ನು ನಾಟಕದಲ್ಲಿ ಕುವೆಂಪುರವರು ಗರ್ಭಿಕರಿಸಿದ್ದಾರೆ.[೧]

ಜಲಗಾರ ನಾಟಕದಲ್ಲಿ ಕಾಯಕವೇ ಕೈಲಾಸ ಎಂಬ ೧೨ನೇ ಶತಮಾನದ ಶರಣರ ವಚನ ತತ್ವವನ್ನು ಮೇಳೈಸಿದ್ದಾರೆ. ಶಿವನು ಪುರೋಹಿತಶಾಹಿಗಳ ದಬ್ಬಾಳಿಕೆಗೆ ಒಳಗಾಗಿ ಸೆರೆಯಾಗಿ ಸಂಪ್ರದಾಯ ಗಂಗೆ, ಜಡೆ, ಚಂದ್ರ, ಹಾವು, ರುದ್ರಾಕ್ಷಿ, ಬೂದಿ, ಹಣೆಗಣ್ಣುಗಳನ್ನು ಹೇರಿ ದೇವಾಲಯದಲ್ಲಿ ಕೂಡಿಹಾಕಿರುವರು. ಆದರೆ ನಿಜಶಿವನು ಇವನ್ನೆಲ್ಲಾ ಬಲ್ಲನು. ಅವನು ಜಗದ ಜಲಗಾರನಾಗಿದ್ದಾನೆ ಎಂದು ತಮ್ಮ ನಾಟಕದಲ್ಲಿ ತೋರಿಸಿದ್ದಾರೆ. ಜಲಗಾರ ದೇವಾಲಯಕ್ಕೆ ಹೋಗಲಾರನಾದರೂ ಅವನಲ್ಲಿಯೇ ದೇವರ ಅಂಶ ಇದೆ ಎಂಬುದನ್ನು ತೋರಿಸಿದ್ದಾರೆ. ಶಿವನು ಬೀದಿಗುಡಿಸುವವನ ಬಡವನೆದೆಯಲ್ಲಿ, ಉಳುವ ಒಕ್ಕಲಿಗನೆದೆಯಲ್ಲಿ, ಹೊಲೆಯನ ಕಾರ್ಯದಲ್ಲಿ ಇರುವನೆಂದೂ, ಕುಂಟರು, ಕುರುಡರು, ದೀನನು, ಅನಾಥರನು ಕೈಹಿಡಿದು ಪೊರೆಯುತಿರುವೆ ಎಂದು ಹೇಳುವಲ್ಲಿ ಇಡೀ ನಾಟಕದ ತಿರುಳಿದ್ದು ಆ ಮೂಲಕ ಶಿವನು ಸರ್ವವ್ಯಾಪಿ, ಅವನಿಗೆ ಜಾತಿ, ಧರ್ಮ, ಕುಲಗಳ ಕಟ್ಟಿಲ್ಲ. ಅವನು ಎಲ್ಲರಿಗೂ ಸಿಗುವ ಮುಕ್ತ ಶಿವ, ಸ್ವತಂತ್ರಶಿವ ಎಂಬುದನ್ನು ತೋರಿಸಿದ್ದಾರೆ. ಜಲಗಾರ ನಾಟಕದ ಮೂಲಕ ಶಿವನು ಶಾಸ್ತ್ರಿಗಳ, ಕಾವ್ಯಗಳ, ಕವಿತೆಯ, ಶಿವನಲ್ಲ, ಬೆಳ್ಳಿ ಬೆಟ್ಟದ ಮೇಲೆ ಗಿರಿಜೆಯೊಡಗೂಡಿ ಸರಸವಾಡುವ ರಸಿಕ ಶಿವನಲ್ಲ, ಬ್ರಹ್ಮಾಂಡ ಒತ್ತುತಿಹ ಕಸದ ರಾಶಿಯ ಮೇಲೆ ಹತ್ತಿ ನಿಂತು ನರ್ತಿಸುವ ಶಿವ ನಿಜ ಶಿವನು ಜಲಗಾರ ಎಂಬುದರ ಮೂಲಕ ಶಿವನು ಸಮಾಜದ ಎಲ್ಲಾ ಸ್ತರದ ಜನರಿಗೂ ಸೇರಿದವನೆಂಬ ಸೂತ್ರವನ್ನು ಮುಂದಿಟ್ಟು, ಶಿವನ ಬಗ್ಗೆ ಇದ್ದ ಕಪಾಲೋ ಕಲ್ಪಿತಗಳನ್ನು ತೊಡೆದುಹಾಕಿ ಸರಳೀಕರಿಸಿದ್ದಾರೆ.

ವಾಲ್ಮೀಕಿಯ ಭಾಗ್ಯ ನಾಟಕದಲ್ಲಿ ಸೀತಾಪರಿತ್ಯಾಗದ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಇಲ್ಲಿ ಸೀತಾದೇವಿಯ ಬಗ್ಗೆ ಸೌಮಿತ್ರಿಗಿರುವ ಭಕ್ತಿಗೌರವಗಳು, ಇವರಿಬ್ಬರ ನಡುವೆ ಇರುವ ತಾಯಿ ಮಗನ ಸಂಬಂಧಗಳು ಇಂದಿನ ಯುವ ಪೀಳಿಗೆ ಜನಾಂಗಕ್ಕೆ ಆದರ್ಶವಾಗಿದೆ. ಇಲ್ಲಿ ಶ್ರೀರಾಮನಾಜ್ಞೆಯನ್ನು ಸೀತಾಮಾತೆಯ ಎದುರಿಗೆ ಹೇಳಲು ಸೌಮಿತ್ರಿಯು ಪಡುವ ಸಂಕಟ, ಅತ್ತ ಶ್ರೀರಾಮನಾಜ್ಞೆ ಇತ್ತ ಸೀತಾದೇವಿಯನ್ನು ಕಾಡುಪಾಲು ಮಾಡಲು ಒಲ್ಲದೆ ಮನಸ್ಸಿನ ಹೊಯ್ದಾಟ, ಉಭಯ ಸಂಕಟಗಳು, ರಾವಣನಿಂದ ಕೊಲ್ಲಿಸದೆ ಲಕ್ಷ್ಮಣನಿಂದ ಕೊಲ್ಲಿಸಲು ರಾಮಾಯಣವನ್ನಾಗಿಸಿದೆಯಾ ಹೇ ವಿಧಿ! ಎಂದು ಲಕ್ಷ್ಮಣ ಉದ್ಗಾರದಲ್ಲಿ ಹಿಂದಿನ ಘಟನೆಯ ಬಗ್ಗೆ ವಿಮರ್ಶಿಸುವ ಅವನ

---

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ – ಸಂಪಾದಕರು, ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೧

ಬುದ್ಧಿಯಲ್ಲಿ ಹೊಸತನವನ್ನು ಕಾಣಬಹುದು. ಶ್ರೀರಾಮನು ಸೀತೆಯನ್ನು ಕಾಡಿಗಟ್ಟಿದ್ದು ಯಾವುದೇ ಕಾರಣಕ್ಕಾಗಲಿ, ಅದು ವಾಲ್ಮೀಕಿಯ ಭಾಗ್ಯವಾಗಿ ಪರಿಣಮಿಸಿದೆ ಎಂದು ಕುವೆಂಪು ಹೇಳಿಕೊಂಡಿದ್ದಾರೆ. ಈ ಕಾರಣದಿಂದಾಗಿಯೇ ಸೀತಾಪರಿತ್ಯಾಗದ ಸಮಸ್ಯೆಯು ಪರಿಹಾರವಾಗದಿದ್ದರೂ, ಅದು ಭಾವಪೂರ್ಣವಾಗುವುದೆಂದೂ ಹೇಳಿದ್ದಾರೆ. ಇಲ್ಲಿ ಕುವೆಂಪುರವರು ರಾಮಾಯಣದ ಕರ್ತೃವಾದ ವಾಲ್ಮೀಕಿಯೇ ತನ್ನ ಕಥಾನಾಯಕಿಯನ್ನು ಸಲುಹುವ ಆಶ್ರಯನೀಡುವ ಅವಕಾಶದೊರೆತು ಅದು ವಾಲ್ಮೀಕಿಯ ಪಾಲಿಗೆ ವಾಲ್ಮೀಕಿಯ ಭಾಗ್ಯವಾಗಿದೆ ಎಂದು ಹೇಳಿದ್ದಾರೆ.

> ತಾಯಿ, ಮೇಲೆಳು
> ನಿನಗೆಲ್ಲಂ ಒಳ್ಳಿತಹುದು
> ನೀನೆನ್ನ ಮಹಾಕಾವ್ಯದ ಸವಿಗಣ್ಣಲ್ತೆ!
> ಕಥಾನಾಯಕಿಕೆಯಲ್ತೆ!
> ವಾಲ್ಮೀಕಿಯ ಭಾಗ್ಯಮಲ್ತೆ!

ಎಂದು ಹೇಳುವಲ್ಲಿ ವಾಲ್ಮೀಕಿಯ ಪಾತ್ರವನ್ನು ಉದಾತ್ತೀಕರಿಸಿದ್ದಾರೆ.

ಶ್ಮಶಾನ ಕುರುಕ್ಷೇತ್ರಂ ನಾಟಕದಲ್ಲಿ ಕಲಿ ಮತ್ತು ದ್ವಾಪರ ಸಂಭಾಷಣೆಯ ಮೂಲಕ, ಅವರ ಆಗಮನ, ನಿರ್ಗಮನದ ಪರಿಸ್ಥಿತಿಯನ್ನು ವಿವರಿಸುತ್ತಾರೆ. ಕಲಿಯನ್ನು ಇದಿರುಗೊಂಡ ದ್ವಾಪರನು 'ಈ ಸತ್ತ ಸುಡುಗಾಡಿನಲಿ ಪಟ್ಟಾಭಿಷೇಕ-ಮಪ್ಪಂತುಟಾಯ್ತೆ' ಎಂದು ಮರುಗುತ್ತಾನೆ. ಇದರಲ್ಲಿ ಪರಿಸ್ಥಿತಿಯ ಘೋರತೆಯನ್ನು ಚಿತ್ರಿಸಿದ್ದಾರೆ. ಎಂಥ ಸಂಸ್ಕೃತಿಯನ್ನು, ವೈಭವವನ್ನು ಪಡೆದ ಯುಗ ದ್ವಾಪರ ಈಗ ರುದ್ರ ಶ್ಮಶಾನವಾಗಿದೆ, ಎಲ್ಲವೂ ನಾಶವಾಗಿದೆ. ಈ ಸ್ವತ್ತನ್ನು ನಾನು ಯಾವ ಮಹೋನ್ನತ ವಸ್ತುವೆಂದು ನಿನಗೆ ನೀಡಲಿ' ಎಂದಾಗ ಕಲಿ ಹೇಳುವ ಮಾತುಗಳು ಅರ್ಥಪೂರ್ಣವಾಗಿದೆ. 'ಸಾವಿನಲಿ ಹೊಸಬಾಲು ಹುದುಗುವುದು, ನಾಶದಲಿ ನವಸೃಷ್ಟಿ ಪವಡಿಸಿದೆ. ನೂರು ಮಾತಿಂದೇನ್ ಸಾವೆ ಹೊಸಬಾಳಿಗಾಧಾರಮಾಗಿರ್ಪುದು. ನಾಶವೇ ನವಸೃಷ್ಟಿಗುತ್ಸಾಹಮಾದಪುದು' ಎಂಬ ಮಾತುಗಳು ಸರ್ವಸತ್ಯವಾಗಿವೆ. ದ್ವಾಪರಯುಗದಲ್ಲಿದ್ದ ಮಹಾನುಭಾವರು, ಕಲಿಗಳು, ವೀರರು, ಮತ್ತೆ ಹುಟ್ಟುವರೆ? ದ್ವಾಪರ ಯುಗದ ಮಹೋನ್ನತಿ ಮತ್ತೆ ತಲೆ ಎತ್ತುವುದೆ? ಎಂಬ ಪ್ರಶ್ನೆಗೆ ಕಲಿ ನೀಡುವ ಉತ್ತರ ಕೊನೆಯ ದೃಶ್ಯದಲ್ಲಿ ರುದ್ರನಿಗೆ ಕೃಷ್ಣ ತೋರಿಸುವ ಕಲಿಯುಗ ಮಹಾಕಾವ್ಯದ ಆರಂಭದೃಶ್ಯ ಪರಿಪಕ್ವತೆಯಿಂದ ಕೂಡಿವೆ. ನಾಟಕದ ಮುಕ್ತಾಯದಲ್ಲಿ ಬಂದಿರುವ 'ಸಾಮಾನ್ಯ ಮಾನವಸಂಸಾರಂ, ಸತಿಪತಿಹರಶೃಂಗಾರಂ, ಮಕ್ಕಳಾಟಂ ನೋವಾ ಎಂಬ ಮಾತುಗಳು ಕವಿಯ ಹೊಸ ನೋಟವನ್ನು ಪ್ರತಿನಿಧಿಸುತ್ತವೆ. ಹಾ.ತಿ.ಕೃಷ್ಣೇಗೌಡ ಪ್ರಕಾರ

೨೦ನೇ ಶತಮಾನದಲ್ಲಿ ಶ್ರೀಸಾಮಾನ್ಯನ ಯುಗ ಈ ಯುಗದಲ್ಲಿ ಅವನಿಗೆ ಪುರಸ್ಕಾರ ದೊರೆಯಬೇಕು. ಶ್ರೀಸಾಮಾನ್ಯನೇ ಭಗವತ್ ಮಾನ್ಯ"[೧]

ಇಲ್ಲಿ ಕುವೆಂಪುರವರ ಮಾನವತಾದೃಷ್ಟಿಯನ್ನು, ಮನುಜಮತ ವಿಶ್ವಪಥವನ್ನು ಮನಗಾಣಬಹುದು. ಶ್ರೀಸಾಮಾನ್ಯನ ಬಾಳು ಬಂಗಾರವಾಗಲೆಂದು, ಹಸನಾಗಲೆಂಬ, ಹಾರೈಕೆಯೊಂದಿಗೆ ನಾಟಕವು ಮುಕ್ತಾಯವಾಗುತ್ತದೆ. ಈ ನಾಟಕದಲ್ಲಿ ಪಾಂಡವರು ಮತ್ತು ಕೌರವರು ರಾಜ್ಯಲಕ್ಷ್ಮಿಯನ್ನು ಪಡೆಯಲು ಕುರುಕ್ಷೇತ್ರದಲ್ಲಿ ಹದಿನೆಂಟು ದಿನಗಳ ಕಾಲ ನಡೆದ ಹೋರಾಟದ ಪರಿಣಾಮವೇ ಶ್ಮಶಾನ ಕುರುಕ್ಷೇತ್ರಂ. ಇಲ್ಲಿ ಪಾಂಡವರ ಜಯ-ಕೌರವರ ಸೋಲುಗಳಲ್ಲಿ ವಿಜಯೋತ್ಸವದ ಉತ್ಸಾಹ, ಪಶ್ಚಾತಾಪಗಳ ಸಾಲಿನಲ್ಲಿ ದುಃಖ, ರೋಧನ, ರಕ್ತಪಿಪಾಸುವಿನ ದಾಹ, ಕಣ್ಣೀರು, ನರಳಾಟಗಳು, ರಕ್ತಭೂಮಿ-ಯಾಗಿ, ಯಾರಿಗೂ ಶಾಂತಿ, ತೃಪ್ತಿಯನ್ನು ನೀಡದೆ, ರೌದ್ರಾತ್ಮಕತೆಯಿಂದ ಇಡೀ ಪ್ರದೇಶವೇ ಕಪ್ಪು ಛಾಯೆಗಳ ಓಡಾಟದಿಂದ ವಿಕೃತತೆಯನ್ನು ಪಡೆಯುವಂತಾಯಿತು. ಯಾರೋ ಇಬ್ಬರ ಪ್ರತಿಷ್ಠೆಯ ಕದನಕ್ಕಾಗಿ ಮುಗ್ಧ ಜೀವಿಗಳ, ಸೈನಿಕರ ಮರಣದಿಂದಾಗಿ, ಅವರನ್ನೇ ನಂಬಿದ ಹೆಂಡತಿಮಕ್ಕಳನ್ನು, ತಂದೆ-ತಾಯಿಯನ್ನು ಅನಾಥರನ್ನಾಗಿಸಿ ಬೀದಿಪಾಲು ಮಾಡಿದ ಈ ಕದನಗಳು ಭವಿಷ್ಯದ ಪ್ರಗತಿಗೆ ಮಾರಕವೆಂಬುದನ್ನು ತಮ್ಮ ನಾಟಕದ ಮೂಲಕ ನಿರೂಪಿಸಿದ್ದಾರೆ.

ಶೂದ್ರತಪಸ್ವಿ ನಾಟಕದಲ್ಲಿ ತಲೆತಲಾಂತರದಿಂದ ಬೆಳೆದುಬಂದ ಜಾತಿಯ ಅಂಧಕಾರಕ್ಕೆ ಕುವೆಂಪುರವರು ಹೊಸದೃಷ್ಟಿಯನ್ನು ನೀಡಿದ್ದಾರೆ. ಮೊದಲದೃಶ್ಯದಲ್ಲಿ ಬೈರವ ಮತ್ತು ಮೃತ್ಯುವಿನ ಸಂಭಾಷಣೆ ಇದೆ. ಇಲ್ಲಿ ಬ್ರಾಹ್ಮಣನು ಶಂಬೂಕ ಮುನಿಯನ್ನು ಶೂದ್ರನೆಂದು ಕರೆದು, ಅವನನ್ನು ಕೀಳಾಗಿ ನೋಡಿದ್ದರಿಂದಲೇ ಧರ್ಮದೇವತೆಯು ಮುನಿದ ಅವಳ ಆಜ್ಞೆಯನುಸಾರವಾಗಿ ಮೃತ್ಯುವು ಆಶ್ರಮ ಪ್ರವೇಶಿಸಿ ಪಾರ್ವನ ಮುನಿಗೆ ಅಕಾಲಿಕ ಮರಣವನ್ನುಂಟು ಮಾಡುತ್ತದೆ. ಇಲ್ಲಿ ಶಂಬೂಕನು ಶೂದ್ರನಾದರೂ ಅವನು ತಪಸ್ಸನ್ನು ಮಾಡುತ್ತಿದ್ದರಿಂದ, ತಪಸ್ಸು ಮತ್ತು ಅದನ್ನು ಆಚರಿಸುವವರು ಯಾರೇ ಆಗಲಿ ಅವರು ಪೂಜ್ಯರು ಎಂಬ ತತ್ವವನ್ನು ಕುವೆಂಪು ಸಾರಿದ್ದಾರೆ.

ಇಲ್ಲಿ ಶ್ರೀರಾಮನು ಮೂಲಪುರಾಣದ ಶ್ರೀರಾಮನಂತೆ ಮುಂಗೋಪಿಯಾಗದೆ, ಪಾರ್ವನು ಶಂಬೂಕನೆಂಬ ಶೂದ್ರನ ತಪಸ್ಸಿನಿಂದ ಧರ್ಮಮುನಿದು ತನ್ನ ಮಗನ ಅಕಾಲ ಮರಣವಾಗಿದೆ ಎಂದು ಹೇಳುವಾಗ ಕುವೆಂಪು ಶ್ರೀರಾಮನು ಸ್ವತಂತ್ರವಾಗಿ

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ - ಸಂಪಾದಕರು, ದೇಜಗೌ - ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೧

ಆಲೋಚಿಸುತ್ತಾನೆ. ತನ್ನ ಮನಸ್ಸಿನಲ್ಲೇ 'ಈ ವರ್ಣಗರ್ವಾಂಧರಿಗೆ ಈ ಶಾಸ್ತ್ರ ಮೂರ್ಖಂಗಂತೂ ಬುದ್ಧಿಗಲಿಪನ್' ಎಂದು ನಿರ್ಣಯಿಸುತ್ತಾನೆ. ಬಾಣಪ್ರಯೋಗಕ್ಕೆ ಪಾರ್ವನ ಸಮ್ಮತಿಯನ್ನು ಕೇಳುವನು. ಅದರಂತೆ 'ಅರಸಿಕೊಲ್ ಅರಗುಲಿಯನ್' ಎಂದು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವನು. ಬ್ರಹ್ಮಾಸ್ತ್ರವು ವಿಫಲವಾಗಿ ಶಂಬೂಕ ಮಹರ್ಷಿಗೆ ನಮಸ್ಕರಿಸಿ ಪಾರ್ವನ ಬಳಿ ಬರಲು, ದಾರಿತೋರೆಂದು ಶ್ರೀರಾಮನನ್ನು ಬೇಡಲು, ನೀನು ಅವಜ್ಞೆಗೈದದ್ದು ನನನ್ನಲ್ತು ಎಂದು ಹೇಳಿ ಬ್ರಾಹ್ಮಣರಿಗೆ ಬುದ್ಧಿ ಹೇಳಿ ಅವನ ವರ್ಣ, ಶಾಸ್ತ್ರಗರ್ವಾಂಧತೆಯನ್ನು ನಿರ್ಮೂಲನಮಾಡಿ ಪಾರ್ವನಿಗೆ ಜ್ಞಾನೋದಯವನ್ನುಂಟು ಮಾಡಿ ಪರ್ವ ಮತ್ತು ಆತನ ಪುತ್ರನನ್ನು ಶಂಬೂಕಯೋಗಿಗೆ ನಮಸ್ಕರಿಸುವಂತೆ ಮಾಡಿ ಬದುಕಿಸಿದನು. ಈ ನಾಟಕದ ಮೂಲಕ ಶ್ರೀರಾಮನಿಗೆ ಅಂಟಿದಂತೆ ಚಾರಿತ್ರಿಕ ಅಪವಾದವನ್ನು ಕೊಳೆಯನ್ನು ಕಳೆದಿದ್ದಾರೆ.

"ಧರ್ಮದ ಹೆಸರಿನಲ್ಲಿ ಅನ್ಯಾಯ ನಡೆಯಬಾರದು, ಸತ್ಯ ಗೆಲ್ಲಬೇಕು. ಧರ್ಮವೆಂಬುದು ಶಾಸ್ತ್ರದ ಸ್ವತ್ತಲ್ಲ. ಅದು ಆಚರಣೆಯಲ್ಲಿರುವಂಥದ್ದು. ಜಾತಿಗಿಂತ ಗುಣಪ್ರಧಾನವಾದದ್ದು ಎಂಬ ತತ್ವವನ್ನು ಸಾರಿದ್ದಾರೆ"[೧] ಎಂದು ಹಾ.ತಿ.ಕೃಷ್ಣೇಗೌಡರು ತಮ್ಮ ವಸ್ತುವಿನ್ಯಾಸದಲ್ಲಿ ಹೇಳಿದ್ದಾರೆ.

ಬೆರಳ್‌ಗೆ ಕೊರಳ್ ನಾಟಕದಲ್ಲಿ ಕುವೆಂಪುರವರು ಗುರುತತ್ವ, ಕರ್ಮತತ್ವ ಯುಜ್ಞತತ್ವ ಈ ಮೂರೂ ಅಂಶಗಳನ್ನು ತಳಹದಿ ಮಾಡಿಕೊಂಡು ರಚಿಸಿದ್ದಾರೆ. ಏಕಲವ್ಯ ಮತ್ತು ದ್ರೋಣ ಈ ಎರಡೂ ಪಾತ್ರಗಳೇ ನಾಟಕದ ಪ್ರಧಾನಪಾತ್ರಗಳಾಗಿದ್ದು ಗುರು ಮತ್ತು ಶಿಷ್ಯರ ಆದರ್ಶತೆಯನ್ನು ಎತ್ತಿ ಹಿಡಿದಿವೆ.

ಗುರುದ್ರೋಣಾಚಾರ್ಯರ ಪಾತ್ರವು ಮೂಲದಲ್ಲಿ ಮಸಿಬಳಿದುಕೊಂಡಿದ್ದು, ಅದನ್ನು ಕುವೆಂಪುರವರ ತಮ್ಮ ನಾಟಕದಲ್ಲಿ ಉದಾರತೆಯಿಂದ ಅಳಿಸಿಹಾಕಿದ್ದಾರೆ. ದ್ರೋಣನು ಏಕಲವ್ಯನನ್ನು ಶಿಷ್ಯನನ್ನಾಗಿ ಸ್ವೀಕರಿಸುವುದಲ್ಲದೆ, ಅರ್ಜುನನ ವಿರೋಧದಿಂದಾಗಿ ಏಕಲವ್ಯವನ್ನು ಅವರ ಮನೆಯಲ್ಲೇ ಆಶ್ರಯನೀಡಿ ವಿದ್ಯಾದಾನ ಮಾಡುವರು. ದ್ರೋಣರು ಏಕಲವ್ಯನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆಯಲು ಬರುವಾಗ ಮೂಲದಲ್ಲಿ ಯಾವ ಧರ್ಮಸಂಕಟಕ್ಕೂ ಒಳಗಾಗುವುದಿಲ್ಲ. ಆದರೆ ಈ ಭಾಗದಲ್ಲಿ ಅವರು ಧರ್ಮಸಂಕಟದಲ್ಲಿ ಸಿಲುಕಿರುತ್ತಾರೆ. ದ್ರುಪದನಿಂದ ಅವಮಾನಿತರಾದ ದ್ರೋಣರು ಅರ್ಜುನನ ಮೂಲಕ ದ್ರುಪದನನ್ನು ಸಂಹರಿಸಿ, ಆ ಗಳಿಗೆಯಲ್ಲಿ ಅರ್ಜುನನಿಗೆ ಬಿಲ್ವಿದ್ಯಾ ಪ್ರವೀಣನನ್ನಾಗಿಸುವ ವಚನವಿತ್ತಿರುತ್ತಾರೆ. ಇದು ಕುವೆಂಪು

---

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ – ಸಂಪಾದಕರು, ದೇಜಗೌ – ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೦೬

ಸೃಷ್ಟಿ ಇಲ್ಲಿ ದ್ರೋಣರು ಹಂಗಿಗಿ ಒಳಗಾಗಿದ್ದು, ಈ ಹಂಗೇ ಅವರ ಕೊರಳನ್ನು ಬಲಿತೆಗೆದುಕೊಳ್ಳುವ ಉರುಳಾಗುತ್ತದೆ. ಹೀಗೆ ಮಹಾನ್ ವ್ಯಕ್ತಿಗಳ ಪ್ರತೀಕಾರ ಭಾವನೆ, ಸಂತೋಷದ ಗಳಿಗೆಯಲ್ಲಿ ಕೊಟ್ಟ ವಚನದಿಂದಾಗಿ ಹಂಗಿಗೆ ಒಳಗಾಗಿ ಅವರ ವ್ಯಕ್ತಿತ್ವವನ್ನೇ ಬಲಿಕೊಡುವ ಪರಿಸ್ಥಿತಿಯನ್ನು ಇಲ್ಲಿ ಕಾಣಬಹುದು.

ದ್ರೋಣಾಚಾರ್ಯರು ಏಕಲವ್ಯನಿಗೆ ಗಗನದಲ್ಲಿ ಹಾರಾಡುತ್ತಿರುವ ಹಕ್ಕಿಯನ್ನು ಕೊಲ್ಲುವಂತೆ ಹೇಳಿದಾಗ ಏಕಲವ್ಯನು ಏನೂಮಾಡದ ಪಕ್ಷಿಯನ್ನು ಕೊಂದು ತನ್ನ ವಿದ್ಯೆಗೆ ಪಾಪವನ್ನು ಹೇಗೆ ತಂದುಕೊಳ್ಳಲಿ? ವಿದ್ಯೆ ಇರುವುದು ಸದ್ವಿನಿಯೋಗಕ್ಕೆ ಎಂಬುದರಲ್ಲಿ ಏಕಲವ್ಯನ ಮಾನವತಾವಾದದ ಮುಖ ಅರಳುತ್ತದೆ. ಈ ಸಂದರ್ಭ ಹೆಚ್ಚು ಮಾನವೀಯವಾಗಿದೆ.

ಏಕಲವ್ಯನು ತನ್ನ ಹೆಬ್ಬೆರಳನ್ನು ಕೊಡುವ ಸಂದರ್ಭದಲ್ಲಿ 'ಪಡೆದುದೆಲ್ಲಂ ಕೊಡುವುದಕ್ಕಲ್ತೆ? ಆರ್ಯ, ಮೇಣ್‌ಪೂರ್ಣಮಂ ಕೊಡದೆ ಪಡೆದಪೆವಂತು ಪೂರ್ಣಮಂ' ಎಂಬ ಏಕಲವ್ಯನ ಮಾತುಗಳಿಂದ ಅವನ ತ್ಯಾಗಮಯ ಮನೋಭಾವನೆಯನ್ನು ಕಾಣಬಹುದು. ಏಕಲವ್ಯನ ಮಾತುಗಳಿಂದ, ಅವನ ತ್ಯಾಗಮಯ ಮನೋಭಾವನೆಯನ್ನು ಕಾಣಬಹುದು. ಏಕಲವ್ಯನು ತನ್ನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ನೀಡಿದಾಗ, ಅಲ್ಲಿ ಮಡುಗಟ್ಟಿ ನಿಂತಿದ್ದ ರಕ್ತದಲ್ಲಿ ದ್ರೋಣರ ತಲೆಯನ್ನು ಬಲವಾದ ಹಿಡಿತಹೊಂದಿದ ಖಡ್ಗದ ಪ್ರಹಾರದಿಂದ ಕತ್ತರಿಸುವ ದೃಶ್ಯವನ್ನು ಕಾಣುತ್ತಾರೆ. ಇದು ಅವರ ಮುಂದಿನ ಕೇಡುಗಾಲದ ಸೂಚನೆಯಾಯಿತು. ಇದು ನಡೆದೇ ತೀರಬೇಕೆನ್ನುವಂತೆ, ಏಕಲವ್ಯನ ಬಲಿದಾನವನ್ನು ಕಂಡ ಅಬ್ಬೆಯು 'ಆರ್ಗೋ ಬಲಿ ನನ್ನ ಕಂದನ ಬೆರಳ್ ಬಲಿಯಕ್ಕೆ ಆ ಪಾಪಿಯ ಕೊರಳ್' ಎಂಬ ಶಾಪವನ್ನು ನೀಡುವುದುರ ಮೂಲಕ ಅಸಹಾಯಕರ, ಸಾಮಾಜಿಕ ದಬ್ಬಾಳಿಕೆಗೆ ಒಳಗಾದ ಜನರ ಪ್ರತಿಭಟನೆಯ ಧ್ವನಿಯನ್ನಾಗಿಸಿದ್ದಾರೆ.

ಚಂದ್ರಹಾಸ ನಾಟಕದಲ್ಲಿ ಚಂದ್ರಹಾಸನಿಗೆ ದೈವರಕ್ಷೆಯಿದ್ದು ಇದು ಅವನ ಬಾಲ್ಯದಿಂದ ಕೊನೆಗಾಲದವರೆಗೂ ಅವಿರತವಾಗಿ ಪ್ರತೀ ಹಂತದಲ್ಲೂ ಸಾಗುತ್ತದೆ. ಚಂದ್ರಹಾಸನ ರಕ್ಷಣೆಗೆಂದೇ ಕುವೆಂಪು ಭಕ್ತಿದೇವಿ, ಪ್ರಾರ್ಥನಾದೇವಿ, ಕೃಪಾದೇವಿ-ಯರನ್ನು ಸೃಷ್ಟಿಸಿ ಅವರು ಚಂದ್ರಹಾಸನಿಗಾಗಿ ಭೂಮಿಗೆ ಅವತರಿಸಿಬರುವರು. ಅವನಿಗೆ ಬೆನ್ನಲುಬಾಗಿನಿಲ್ಲುವರು. ಕುವೆಂಪುರವರು ಚಂದ್ರಹಾಸನ ಬಾಲ್ಯದ ಲಾಲನೆ-ಪಾಲನೆಯು ಮುದುಕಿಯ ನೆರಳಿನಲ್ಲಿ ನಡೆಯುವಂತೆ ಮಾಡಿದ್ದು, ಇಲ್ಲಿ ರಾಜವಂಶದಲ್ಲಿ ಜನಿಸಿದ ಬಾಲಕ ಚಂದ್ರಹಾಸನು ರಾಜನ, ಅರಮನೆಯ ಸುಖ-ಭೋಗಗಳಿಂದ ವಂಚಿತನಾಗಿ, ಬೀದಿ ಬಾಲಕರ ಜೊತೆ ಅನಾಥನಾಗಿ ಮುದುಕಿಯ ಪಾಲನೆಯಲ್ಲಿ ಬೆಳೆದ ಸನ್ನಿವೇಶ, ಚಂದ್ರಹಾಸನನ್ನು ಪೋಷಿಸಲು ಮುದುಕಿಯು ಪಡುವ ಬವಣೆ,

ಸಂಕಷ್ಟ ಪರಿಸ್ಥಿತಿಗಳು ನವೀನ್ಯತೆಯನ್ನು ಪಡೆದುಕೊಂಡಿವೆ. ಅದೇ ರೀತಿ ಮಾರ, ಕಾಳ, ಭೀಷಣರೆಂಬ ಚಂಡಾಳರು ಚಂದ್ರಹಾಸನ ಹರಿಭಕ್ತಿ, ಅವನ ರಾಜಮುಖಡಕಳೆಗೆ ಸೋತು ಕೊಲ್ಲದೇ ಅವನ ಆರನೆಯ ಬೆರಳನ್ನು ಕತ್ತರಿಸಿದ್ದು, ರಾಕ್ಷಸರಲ್ಲಿನ ಮಾನವೀಯತೆಯ ಮುಖವನ್ನು ಕುವೆಂಪು ಅನಾವರಣಗೊಳಿಸಿದ್ದಾರೆ.

ಮುದುಕಿಯ ತನ್ನ ಕೊನೆಗಾಲದಲ್ಲಿ ಹೆಂಗಸಿನರೂಪದ ದೇವತೆಯ ಜೊತೆ ಸಂವಾದಿಸುತ್ತಾ, ಚಂದ್ರಹಾಸನ ಸಂಪೂರ್ಣ ರಕ್ಷಣೆಯ ಹೊರೆಯನ್ನು ಹೆಂಗಸಿನ ದೇವತೆಗೆ ವಹಿಸಿ ತನ್ನ ಕೊನೆಗಾಲವನ್ನು ಕಾಣುವಳು. ಇಲ್ಲಿ ಚಂದ್ರಹಾಸನ ಬಗೆಗೆ ಮುದುಕಿಗೆ ಇದ್ದ ಪ್ರೀತಿ ಅಕ್ಕರೆ, ಅಭಿಮಾನಗಳನ್ನು ಕಾಣಬಹುದು.

ಚಂದ್ರಹಾಸನು ಕುಳಿಂದಕನ ಜೊತೆ ಚಂದನಾವತಿಗೆ ಬಂದು ಅವನ ಸಾಕುಮಗನಾದ ಸಂದರ್ಭದಲ್ಲಿ ಚಂದನಾವತಿಯ ದಾರಿದ್ರ್ಯ ತೊಲಗಿ, ಸುಭಿಕ್ಷೆ ನೆಲೆಸುವುದು, ಆತನ ಮಹಿಮೆಯಿಂದ ಕುಂಟರಿಗೆ ಕಾಲುಬಂದಿತು. ಕುರುಡರಿಗೆ ಕಣ್ಣು, ಮೂಕರಿಗೆ ಬಾಯಿ, ವೈದ್ಯ, ಮದ್ದು, ಮಂತ್ರಗಳಿಗೆ ಗುಣವಾಗದಿದ್ದ ರೋಗಗಳು ಗುಣವಾದವು. ಇಲ್ಲಿ ಕುವೆಂಪು ಚಂದ್ರಹಾಸನ ಪಾತ್ರವನ್ನು ಪವಾಡಗಳ ಮೂಲಕ ಉನ್ನತೀಕರಿಸಿದ್ದಾರೆ. ಅದೇ ರೀತಿ ಚಂದ್ರಹಾಸನಿಗೆ ವೀರಸೇನ ರಣಸಿಂಹರೆಂಬ ಸೇನಾಧಿಕಾರಿಗಳನ್ನು ಸೃಷ್ಟಿಸಿ ಅವನ ಬೆಂಗಾವಲಿಗೆ ಒತ್ತಾಸೆಯಾಗುವಂತೆ ಮಾಡಿದ್ದಾರೆ.

ದುಷ್ಟಬುದ್ಧಿಯು ಚಂದ್ರಹಾಸನನ್ನು ಹತ್ಯೆಮಾಡಲು ಬಳಸಿದ ತಂತ್ರಗಳಿಗೆ ವಿರುದ್ಧವಾಗಿ ಪ್ರತಿತಂತ್ರಗಳು ಸ್ವಾಭಾವಿಕವಾಗಿ ನಿರ್ಮಾಣಗೊಂಡು ಚಂದ್ರಹಾಸನ ರಕ್ಷಣೆಯಾಗುತ್ತದೆ. ಕೊನೆಗೆ ದುಷ್ಟಬುದ್ದಿಯ ಕುಟಿಲೋಪಾಯಕ್ಕೆ ಅವನ ಮಗ ಮದನನೇ ಚಂಡಿಕಾಲಯದಲ್ಲಿ ಬಲಿಯಾಗುವನು. ನಂತರ ತಾನೂ ಆತ್ಮಹತ್ಯೆ ಮಾಡಿಕೊಳ್ಳುವನು. ಚಂದ್ರಹಾಸನ ಪ್ರಾರ್ಥನೆಗೆ ಒಲಿದ ಕಾಳಿಯು ಮದನನಿಗೆ ಜೀವದಾನವನ್ನು ನೀಡುವುದರ ಮೂಲಕ ನಾಟಕ ಸುಖಾಂತ್ಯವಾಗುತ್ತದೆ. ಇಲ್ಲಿ ಚಂದ್ರಹಾಸರ ದೈವಭಕ್ತಿಯ ಪರಾಕಾಷ್ಠತೆಯು ಚಿತ್ರಿತವಾಗಿದೆ. ಇಡೀ ನಾಟಕವು 'ವಿಷವ ಮೋಹಿಸುವಂತೆ' ಎಂಬ ದುಷ್ಟಬುದ್ದಿಯು ತನ್ನ ಮಗ ಮದನನಿಗೆ ಬರೆದ ಪತ್ರದ ಒಕ್ಕಣೆಯಲ್ಲಿ ಅಡಕವಾಗಿದ್ದು ವಿಷಯೆಯು ಇಲ್ಲಿ ನಾಟಕಕ್ಕೆ ತಿರುವನ್ನು ನೀಡುವಳು, ಅವಳು ವಿಷವನ್ನು, 'ವಿಷಯೆಯನ್ನು ಮೋಹಿಸುವಂತೆ' ಮಾಡುವುದೆಂದು ತಿದ್ದಿದ ಪರಿಣಾಮವೇ ಚಂದ್ರಹಾಸ ನಾಟಕದ ಮುಖ್ಯ ತಿರುವು ಆಗಿದೆ.

ಕಾನೀನ ನಾಟಕದಲ್ಲಿ ಕುವೆಂಪು ಕರ್ಣನ ಜನನದ ಪ್ರಸಂಗವನ್ನು ಮೂಲದಲ್ಲಿರುವಂತೆ ಚಿತ್ರಿಸಿದರೂ ಮುಂದೆ ನಾಟಕ ಬೆಳೆದಂತೆ ಅದು ಭಿನ್ನವಾಗುತ್ತಾ ಹೋಗುತ್ತದೆ. ಮೂಲವಸ್ತುವಿಗೆ ಸಂಬಂಧಿಸಿದಂತೆ ನಾಟಕಕಾರರು ಹಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಕನ್ಯೆ ಕುಂತಿಯು ಲೋಕಾಪವಾದಕ್ಕೆ ಹೆದರಿ

ಮಗುವಿನ ಜೊತೆ ತಾನೂ ಗಂಗಾದೇವಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ಸಿದ್ಧಳಾಗುವಾಗ ಗಂಗಾದೇವಿಯು ತಡೆದು, ಕಂದನನ್ನು ತಾನೇ ಪಡೆದುಕೊಳ್ಳುವ ಪ್ರಸಂಗವು ನವೀನ್ಯತೆಯ ಸ್ಪರ್ಶವನ್ನು ಪಡೆದಿದೆ. ಇಲ್ಲಿ ಕುಂತಿದೇವಿಯು ನದಿಗೆ ಹಾರುವ ಪ್ರಸಂಗವು ಕುವೆಂಪು ಸೃಷ್ಟಿಯಾಗಿದೆ. ಈ ನಾಟಕ ಕರ್ಣನು ಪ್ರಾಮಾಣಿಕನಾಗಿದ್ದು, ತನ್ನ ಗುರು ಪರುಶುರಾಮರ ಬಳಿ ತಾನು ಬೆಸ್ತರ ಮಗನೆಂದು ಹೇಳಿ ಶಿಷ್ಯವೃತ್ತಿಯನ್ನು ಪ್ರಾರಂಭಿಸುತ್ತಾನೆ. ಎಲ್ಲಾ ಮೂಲದಂತೆ ಸುಳ್ಳು ಹೇಳುವವನಲ್ಲ. ಹೀಗಾಗಿ ಪರಶುರಾಮರು ಕರ್ಣನಿಗೆ ಶಾಪಕೊಡುವ ಸನ್ನಿವೇಶವೇ ಇಲ್ಲಿ ಬರುವುದಿಲ್ಲ. ಈ ದೃಷ್ಟಿಯಿಂದಲೂ ಪರುಶುರಾಮರ ಪಾತ್ರ ಪೂಜನೀಯ-ವಾಗಿದೆ. ಕರ್ಣನು ಶೂದ್ರನೆಂದು ತಿಳಿದ ಮೇಲೂ ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಬಿಲ್ವಿದ್ಯೆಯನ್ನು ಕಲಿಸುತ್ತಾರೆ. ಇಲ್ಲಿ ಕುವೆಂಪುರವರು ಶ್ರೀರಾಮನನ್ನು ಆದರ್ಶನನ್ನಾಗಿ ಮಾಡಿದಂತೆ ಮೂಲದಲ್ಲಿ ಪರಶುರಾಮರಿಗಿದ್ದ ಜಾತ್ಯಾಂಧತೆಯ ಕಳೆಯನ್ನು ತೊಳೆದಿದ್ದಾರೆ.

ಭೀಷ್ಮರು ತಮ್ಮ ಗುರುವಾದ ಪರುಶುರಾಮರಲ್ಲಿಗೆ ಬಂದಿದ್ದಾಗ, ಕರ್ಣನ ಪರಾಕ್ರಮವನ್ನು ಮೆಚ್ಚಿ ತಮ್ಮ ಗುರುವಿನ ಅಪ್ಪಣೆಯಂತೆ ಆತನನ್ನು ಹಸ್ತಿನಾವತಿಗೆ ಕರೆದೊಯ್ಯುತ್ತಾರೆ. ಪರುಶುರಾಮರನ್ನು ಕರ್ಣ ಅಗಲುವಾಗ, ಪರುಶುರಾಮರು ಗುರು-ಸ್ಥಾನದಲ್ಲಿ ನಿಂತು ಹೇಳುವ ಮಾತುಗಳು ಬಹುಮುಖ್ಯವಾದವು; 'ನನ್ನಿಯನುಳಿಯ-ಬೇಡ, ಸಲಹಿದೊಡೆಯಗೆ ಮರಳಿ ದ್ರೋಹವನೆಣಿಸಬೇಡ, ದೀನರ ತುಳಿಯದಿರು, ಧೂರ್ತರಿಗೆ ಮಣಿಯದಿರು, ಕಾಳಗದೊಳಿರುವಾಗ ಧರ್ಮಯುದ್ಧವನೆಂದೂ ನೀಗದಿರು, ಅರಿಗಳಿಗೆ ಮೈಸೋತು ಹಿಮ್ಮೆಟ್ಟದಿರು ಸಿಂಹದೊಲುಬಾಳು' ಇವೇ ನೀ ನನಗೆ ನೀಡುವ ಗುರುದಕ್ಷಿಣೆ ಎನ್ನುವ ಸನ್ನಿವೇಶವು ಸಂಪೂರ್ಣವಾಗಿ ಹೊಸತನವನ್ನು ತಂದು-ಕೊಡುವುದಲ್ಲದೆ ಪರಶುರಾಮರ ವ್ಯಕ್ತಿತ್ವವನ್ನು ಉಚ್ಛ್ರಾಯಸ್ಥಿತಿಗೆ ಕೊಂಡೊಯ್ದಿದ್ದಾರೆ. "ಇಲ್ಲ ಗುರುವಿಗೆ ಶಿಷ್ಯನಲ್ಲಿರಬೇಕಾದ ಪ್ರೀತಿ, ವಿಶ್ವಾಸ, ಶಿಷ್ಯನ ಏಳಿಗೆ ತನ್ನ ಏಳಿಗೆ ಎಂಬ ಉದಾತ್ತ ಧ್ಯೇಯ ಇಲ್ಲಿ ಅನಾವರಣಗೊಂಡಿದೆ. ಇಲ್ಲಿ ಪರಶುರಾಮರಿಗೆ ಮೂಲದಲ್ಲಿ ಅಂಟಿದ್ದ 'ಸಿಡುಕುತಪಸಿ' ಎಂಬ ಕಳಂಕವನ್ನು ದೂರ ಮಾಡಿದ್ದಾರೆ.[೧] ಗುರುಶಿಷ್ಯರ ಸಂಬಂಧವು ಸರ್ವಕಾಲಕ್ಕೂ ಸರ್ವಸ್ಥಳಕ್ಕೂ ಅನ್ವಯವಾಗುವಂತೆ ಮಾಡುವುದರ ಮೂಲಕ ಕರ್ಣನ ಮತತು ಪರುಶುರಾಮರ ವ್ಯಕ್ತಿತ್ವ ಔನತ್ಯವನ್ನು ಹೊಂದಿದೆ.

---

೧. ಹಾ.ತಿ.ಕೃಷ್ಣೇಗೌಡ, ಕು.ನಾಟಕ ವಿಹಾರ - ಸಂಪಾದಕರು, ದೇಜಗೌ - ವಸ್ತುವಿನ್ಯಾಸದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೦೮

ಕರ್ಣನು ಹಸ್ತಿನಾವತಿಗೆ ತೆರಳಿ ಭೀಷ್ಮನ ಸಹಕಾರದಿಂದ ಕೌರವೇಂದ್ರನ ಪಡೆಯನ್ನು ಸೇರುವ ಸಂದರ್ಭದಲ್ಲಿ ದುಶ್ಯಾಸನ ಕರ್ಣನನ್ನು ಕುರಿತು ಹೇಳುವ 'ನಮಗೇನು? ಯಾರಾದರೇನಂತೆ, ವೀರನಾದರೆ ಸಾಕು, ಸೂತನಾಗಲಿ ಬೆಸ್ತನಾಗಲಿ, ಆತ್ಮಕ್ಕೆ ಸೂತತ್ವಮೆಲ್ಲಿಯದು ಬೆಸ್ತತನಮೆಲ್ಲಿಯದು' ಎಂಬ ಮಾತುಗಳು ಮನನೀಯವಾದವು. ಇಲ್ಲಿ ಕುವೆಂಪುರವರ ವರ್ಣಸಮಾನತೆ ಸಾಮಾಜಿಕ ಸಮಾನತೆ ಮತ್ತು ವೈಚಾರಿಕ ಪ್ರಜ್ಞೆಯನ್ನು ತಿಳಿಯಬಹುದು. ಇಂತಹ ಘಟನೆಗಳು ನಾಟಕಕ್ಕೆ ಹೆಚ್ಚು ಗೌರವವನ್ನು ತಂದುಕೊಡುವುದರ ಮೂಲಕ ಅವು ಸರ್ವಕಾಲಿಕ ಮೌಲ್ಯವನ್ನು ಪಡೆಯುವಂತೆ ಮಾಡಿವೆ.

# ಉಪಸಂಹಾರ

'ಕುವೆಂಪುರವರ ಪೌರಾಣಿಕ ನಾಟಕಗಳ ಅಧ್ಯಯನ'ದಲ್ಲಿ ಈ ಅಧ್ಯಾಯವನ್ನು ಸೇರಿ ಐದು ಅಧ್ಯಾಯಗಳಲ್ಲಿ ಬಿಡಿಬಿಡಿಯಾಗಿ ನಿರೂಪಿಸಲಾಗಿದೆ.

ಅಧ್ಯಾಯ ೧ರಲ್ಲಿ ಭಾರತೀಯ ಸಾಹಿತ್ಯಕ್ಷೇತ್ರದಲ್ಲಿ ನಾಟಕಕ್ಷೇತ್ರದ ವ್ಯಾಪಕತೆಯನ್ನು ಮನಗಾಣಬಹುದು. ನಮ್ಮ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ತಮ್ಮ ವಸ್ತು, ಸನ್ನಿವೇಶಗಳಿಂದ ಹೇಗೆ ನಾಟಕ ಕ್ಷೇತ್ರವನ್ನು ತಾಯಿಯಂತೆ ಸಲುಹಿದೆ ಎಂಬುದನ್ನು ತಿಳಿಯಬಹುದು. ಈ ಭಾಗದಲ್ಲಿ ನಾಟಕಕಾರನು ಹೇಗೆ ವಿವಿಧ ದೃಷ್ಟಿಕೋನಗಳಲ್ಲಿ ಮೂಲವಸ್ತುಗಳನ್ನು ನೋಡಿದ್ದಾರೆ ಎಂಬುದನ್ನು ತಿಳಿಯಬಹುದು. ಹಳೆಗನ್ನಡ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ನಮ್ಮ ಪುರಾಣ ವಸ್ತುಗಳು ಹೇಗೆ ವಿಪುಲವಾಗಿ ಬಳಕೆಯಾಗಿವೆ. ಅವುಗಳ ಬಳಕೆಯಲ್ಲಿ ನಾಟಕಗಾರನ ಮೇಲೆ ಪ್ರಭಾವ ಬೀರಿರುವ ಪರಿಸರ, ಪ್ರೇರಣೆ, ಇತರ ಅಂಶಗಳ ಬಗ್ಗೆ ಪ್ರಸ್ತಾಪಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ನಾಟಕ ಪರಂಪರೆಗಳ ಬಗ್ಗೆ ಚರ್ಚಿಸಲಾಗಿದ್ದು, ಕುವೆಂಪುರವರ ಪೌರಾಣಿಕ ನಾಟಕಗಳಿಗೆ ಹಿನ್ನಲೆಯಾದ ಅಂಶಗಳನ್ನು ಕುರಿತು ತಿಳಿಸಿದ್ದು, ಕನ್ನಡ ಸಾಹಿತ್ಯದ ನಾಟಕಗಳಲ್ಲಿ ಬಹುಪಾಲು ವಸ್ತುಗಳ ಆಯ್ಕೆಗೆ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳು ತೊಟ್ಟಿಲಾಗಿವೆ ಎಂಬುದನ್ನು ತೋರಿಸಲಾಗಿದೆ. ಇದೇ ರೀತಿ ನಾಟಕಗಳ ವಿಧಗಳಾದ ಸುಖಾಂತ್ಯ ನಾಟಕಗಳು ಮತ್ತ ದುರಂತ ನಾಟಕಗಳ ಬಗ್ಗೆ ತಿಳಿಸಲಾಗಿದೆ. ಹಿಂದಿನ 'ಮಿತ್ರವಿಂದಾ ಗೋವಿಂದ' ನಾಟಕದಿಂದ ಹಿಡಿದು ಹೊಸಗನ್ನಡ ನಾಟಕಕಾರರವರೆಗೆ ನಾಟಕ ಬೆಳೆದು ಬಂದ ಬಗೆಯನ್ನು ವಿವರಿಸಲಾಗಿದೆ. ಅದೇ ರೀತಿ ಕುವೆಂಪುರವರು ನಾಟಕ ಪ್ರಕಾರಗಳು, ಅವರ ಪೌರಾಣಿಕ ನಾಟಕದಲ್ಲಿ ಮಾಡಿರುವ ಪರಿವರ್ತನೆಗೆ ಕಾರಣವಾಗಿರುವ ಅಂಶಗಳು ಅವರ ಮೇಲೆ ಪ್ರಭಾವ ಬೀರಿದೆ ಅಂಶಗಳ ಬಗ್ಗೆ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕುವೆಂಪುರವರು ಪುರಾಣ ಕಥೆಗಳನ್ನು ತಮ್ಮ ನಾಟಕದಲ್ಲಿ ಪರಿವರ್ತನೆ ಮಾಡಿಕೊಂಡಿರುವ ಬಗೆಯನ್ನು ಕುರಿತು ವಿಷದವಾಗಿ ಚರ್ಚಿಸಲಾಗಿದೆ. ಕುವೆಂಪುರವರು ಯಮನಸೋಲು ನಾಟಕದಲ್ಲಿ ಪಾತಿವ್ರತಧರ್ಮ-ವನ್ನು, ಎದೆಯೊಲುಮೆಯ ಧರ್ಮವನ್ನು ಸಾರಿದ್ದಾರೆ. ಜಲಗಾರ ನಾಟಕದಲ್ಲಿ ಶಿವನ ಸಂಪ್ರದಾಯ, ವೇಷಭೂಷಣಗಳನ್ನು, ಕಳಚಿ ಜಗದ ಜಲಗಾರನನ್ನಾಗಿಸಿದ್ದಾರೆ. ವಾಲ್ಮೀಕಿಯ ಭಾಗದಲ್ಲಿ ರಾಮಾಯಣ ಕರ್ತೃವೇ, ಕಥಾನಾಯಕಿಯಾದ ಸೀತಾದೇವಿ-

ಯನ್ನು ಹುಡುಕಿ ಪೋಷಿಸುವ ಮೂಲಕ ಸೀತಾಪರಿತ್ಯಾಗಕ್ಕೆ ಹೊಸ ವ್ಯಾಖ್ಯಾನವನ್ನು ನೀಡಿ ಸಾರ್ಥಕವನ್ನಾಗಿಸಿದ್ದಾರೆ. ಶ್ಮಶಾನ ಕುರುಕ್ಷೇತ್ರಂ ನಾಟಕದಲ್ಲಿ ಯುದ್ಧದ ಭೀಕರತೆ, ಬಂಧುಗಳ ರೋಧನ, ಆನೆ, ಕುದುರೆ, ಸೈನಿಕರ ಹೆಣಗಳಿಂದ ಕುರುಕ್ಷೇತ್ರಂ ಹೇಗೆ ಶ್ಮಶಾನವಾಗಿ ಪಾಂಡವರು ಗೆದ್ದರೂ ಗೆಲ್ಲಲಿಲ್ಲ, ಕೌರವರು ಸೋತರೂ ಗೆಲ್ಲಲಿಲ್ಲ ಎಂದು ಹೇಳುತ್ತಾ ಸೈನಿಕರ ಪಾತ್ರಗಳಿಂದ ಕೌರವೇಂದ್ರನಲ್ಲಿ ಅವರಿಟ್ಟಿದ್ದ ಸ್ವಾಮಿನಿಷ್ಠೆ, ದ್ವಾಪರನ ವಿದಾಯದ ಮೂಲಕ ಕೌರಾವೇಂದ್ರನ ಪಾತ್ರವನ್ನು ಮೂಲಕ್ಕಿಂತ ಉದಾತ್ತೀಕರಿಸಿದ್ದಾರೆ. ಶೂದ್ರತಪಸ್ವಿ ನಾಟಕದಲ್ಲಿ ಶ್ರೀರಾಮನು ಪ್ರಜ್ಞಾಪೂರ್ವಕವಾಗಿ ವರ್ತಿಸುವಂತೆ ಮಾಡಿ ಶ್ರೀರಾಮನಿಗೆ ಅಂಟಿದ್ದ ಕೊಳೆಯನ್ನು ತೊಳೆದು ಆದರ್ಶ, ಮರ್ಯಾದಾ ಪುರುಷೋತ್ತಮ ಶ್ರೀರಾಮನನ್ನಾಗಿಸಿ, ಪಾರ್ವನಿಗೆ ಜ್ಞಾನೋದಯ ಉಂಟುಮಾಡಿದ್ದಾರೆ. ಬೆರಳ್‌ಗೆ ಕೊರಳ್ ನಾಟಕದಲ್ಲಿ ಗುರುದ್ರೋಣಾಚಾರ್ಯರು ಏಕಲವ್ಯನನ್ನು ಮೂಲಕಥೆಗಿಂತ ವಿರುದ್ಧವಾಗಿ ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ. ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆಯಲು ದ್ವಂದ್ವಕ್ಕೆ ಸಿಲುಕುತ್ತಾರೆ. ಇದಕ್ಕೆ ಪ್ರತಿಯಾಗಿ ಏಕಲವ್ಯನ ತಾಯಿಯು ದ್ರೋಣಾಚಾರ್ಯರ ಕೊರಳನ್ನು ಪ್ರತೀಕಾರದ ಸಂಕೇತವಾಗಿ ಕೇಳುವಂತೆ ಮಾಡಿದ್ದಾರೆ.

ಚಂದ್ರಹಾಸ ನಾಟಕದಲ್ಲೂ ಸಹ ಭಕ್ತಿದೇವಿ, ಕೃಪಾದೇವಿ, ಪ್ರಾರ್ಥನಾದೇವಿ-ಯನ್ನು ಸೃಷ್ಟಿಸಿ ನಾಟಕದ ಆರಂಭದಿಂದ ಅಂತ್ಯದವರೆಗೆ ಚಂದ್ರಹಾಸನಿಗೆ ರಕ್ಷೆ ಒದಗಿಸಿದ್ದಾರೆ. ಚಂದ್ರಹಾಸನ ಸಲುಹಲು ಮುದುಕಿಯು ಪಟ್ಟ ಸಂಕಷ್ಟ ಪರಿಸ್ಥಿತಿ-ಯನ್ನು ತಿಳಿಸಿದ್ದಾರೆ. ಕಾನೀನ ನಾಟಕದಲ್ಲೂ ಕರ್ಣನ ಪಾತ್ರವನ್ನು ಉದಾತ್ತೀ-ಕರಿಸಿದ್ದಾರೆ. ಇಲ್ಲಿ ಕರ್ಣನನ್ನು ಗುರುವಾದ ಪರಶುರಾಮನು ಮೂಲಕ್ಕೆ ವಿರುದ್ಧವಾಗಿ ಶಿಷ್ಯನಾಗಿ ಸ್ವೀಕರಿಸುವರು. ಕರ್ಣನು ತಾನು ಬೆಸ್ತರ ಮಗನೆಂದು ಹೇಳಿ ಶಿಷ್ಯ-ನಾಗುವನು. ಪರಶುರಾಮರು ಕರ್ಣನಿಗೆ ಶಾಪಕೊಡದೆ ನೀತಿವಾಕ್ಯಗಳ ಪಾಲನೆಯೇ ಗುರುದಕ್ಷಿಣೆ ಎಂದು ಹೇಳಿ ಹರಸಿ ಕಳುಹಿಸುತ್ತಾರೆ.

ಕುವೆಂಪುರವರ ನಾಟಕಗಳಲ್ಲಿ ಬಳಕೆಯಾಗಿರುವ ಭಾಷೆಯ ಬಗ್ಗೆ ಸುಧಾಕರರವರು ತಿಳಿಸುವಂತೆ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಮಿಶ್ರಿತವಾದದ್ದು. ಕೆಲವು ಹಳೆಗನ್ನಡ ಶೈಲಿಯ ಪ್ರಾಚುರ್ಯವನ್ನು ಹೊಂದಿದ್ದರೆ ಮತ್ತೆ ಕೆಲವು ಸಂಸ್ಕೃತ ಭೂಯಿಷ್ಠ ಶಿಷ್ಟ ಶೈಲಿಯಿಂದ ಕೂಡಿರುವಂತಹವು. ಇಂತಹ ಸಂಮಿಶ್ರಿತ ಭಾಷೆಯ ನಡುನಡುವೆ ಅಲ್ಲಲ್ಲಿ ಹೊಸಗನ್ನಡದ ಹಾಗೂ ಆಡುಮಾತಿನ ಸೊಗಸನ್ನು ಬಳಸುತ್ತಾರೆ. ಶೂದ್ರತಪಸ್ವಿ, ಬೆರಳ್‌ಗೆ ಕೊರಳ್ ಶ್ಮಶಾನಕುರುಕ್ಷೇತ್ರಂ ನಾಟಕಗಳಲ್ಲಿ ಸಂಸ್ಕೃತ ಮಿಶ್ರಿತ

ಹಳೆಗನ್ನಡ ಭಾಷೆಯ ದಾಟಿ ಇದ್ದು, ರಕ್ತಾಕ್ಷಿ, ಮಹಾರಾತ್ರಿ ನಾಟಕಗಳಲ್ಲಿ ಹೊಸಗನ್ನಡ ಭಾಷೆಯನ್ನು ಬಳಸಿಕೊಂಡಿದ್ದಾರೆ.[೧]

ಕುವೆಂಪುರವರು ನಾಟಕಗಳನ್ನು ಮೂಲದಿಂದಲೇ ಸ್ವೀಕರಿಸಿದರೂ, ಮೂಲಕ್ಕಿಂತ ಅವುಗಳ ಮೂಲಸ್ವರೂಪವನ್ನೇ ಪರಿವರ್ತಿಸಿ, ಪಾತ್ರಗಳ ವ್ಯಕ್ತಿಗಳನ್ನು ನ್ಯಾಯಪರಿಪಾಲಕರನ್ನಾಗಿಸಿ ಇಡೀ ನಾಟಕವು ಸರ್ವಕಾಲಿಕ ಮೌಲ್ಯವನ್ನು ಹೊಂದುವಂತೆ ಮಾಡಿದ್ದಾರೆ. ಇವುಗಳನ್ನು ಸಮರ್ಥಿಸುವಂತೆ ಮೂಲಕ್ಕಿಂತ ಶ್ರೀರಾಮ, ದ್ರೋಣಾಚಾರ್ಯ ಪರಶುರಾಮರ ಪಾತ್ರಗಳನ್ನು ಉನ್ನತೀಕರಿಸಿ ಆದರ್ಶರನ್ನಾಗಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಕುವೆಂಪುರವರ ವೈಚಾರಿಕತೆಯ ಲೇಪನವನ್ನು ಅವರ ನಾಟಕದಲ್ಲಿ ಹೇಗೆ ಲೇಪನಗೊಂಡಿವೆ ಎಂಬುದನ್ನು ಚರ್ಚಿಸಲಾಗಿದೆ. ಯಮನಸೋಲು ನಾಟಕದ ಮೂಲಕ ಪ್ರೀತಿ, ಪ್ರೇಮದಿಂದ ಸಾವನ್ನು ಗೆಲ್ಲಬಹುದು ಅವು ಅಮರವಾಗಿವೆ ಎಂಬ ತತ್ವವನ್ನು ಸಾರಿದ್ದಾರೆ. ವಾಲ್ಮೀಕಿಯ ಭಾಗವು ಸೀತಾ ಪರಿತ್ಯಾಗದಿಂದ ಉಂಟಾಯಿತೆಂಬುದನ್ನೂ, ಶ್ಮಶಾನ ಕುರುಕ್ಷೇತ್ರದ ನಾಟಕದ ಮೂಲಕ ಯಾರೂ ಗೆಲ್ಲಲಿಲ್ಲ ಯಾರು ಸೋಲಲಿಲ್ಲ ಎಂಬ ತತ್ವವನ್ನೂ, ಶೂದ್ರತಪಸ್ವಿಯಲ್ಲಿ ಶ್ರೀರಾಮನ ಸ್ವತಂತ್ರ್ಯ ಆಲೋಚನೆ, ತಪಸ್ಸು ಮಾಡುವವನು ಶ್ರೇಷ್ಠ ಅದು ಜಾತಿಯಿಂದ ನಿರ್ಧಾರವಾಗಬೇಕಿಲ್ಲ ಎಂಬುದನ್ನು ಬ್ರಾಹ್ಮಣನಿಗೆ ಜ್ಞಾನೋದಯವಾಗಿ ಶಂಬೂಕನಿಗೆ ನಮಸ್ಕರಿಸುತ್ತಾನೆ. ಬೆರಳ್‌ಗೆ ಕೊರಳ್ ಕಾನೀನ ನಾಟಕದಲ್ಲಿ ದ್ರೋಣಾಚಾರ್ಯರ ಉದಾತ್ತವರ್ತನೆ, ಜಾತ್ಯಾತೀತತೆ, ಪರಶುರಾಮನ ಗುರುದಕ್ಷಿಣೆಯ ನೀತಿವಾಕ್ಯಗಳು, ಕರ್ಣನ ಪ್ರಾಮಾಣಿಕತೆ, ಕರ್ಣನ ಪ್ರಬುದ್ಧ ಬಿಲ್ವಿದ್ಯೆ, ಏಕಲವ್ಯನ ಗುರುಭಕ್ತಿ, ಅಬ್ಬೆಯ ಮಗನ ಬೆರಳಿಗೆ ಗುರುವಿನ ಕೊರಳ್ ಬೇಡುವುದು ಇಲ್ಲಿ ಸಮಾಜಿಕ ದಬ್ಬಾಳಿಕೆ ಒಳಗಾದವರಿಗೆ ಧ್ವನಿಯನ್ನು ಕುವೆಂಪು ನೀಡಿದ್ದಾರೆ. ಹೀಗೆ ನಾಟಕದಲ್ಲಿ ಹೊಸ ಹೊಸ ಪಾತ್ರಗಳ ಸೃಷ್ಟಿಯಿಂದ, ಮೂಲಪುರಾಣ ಕಥೆಗಳ ಪುರುಷರಿಗೆ ಸರ್ವಕಾಲಕ್ಕೂ ನಿಲ್ಲುವಂತಹ ಚಾರಿತ್ರ್ಯವನ್ನು ನೀಢಿದ್ದಾರೆ. ಇಲ್ಲಿ ಕುವೆಂಪುರವರಲ್ಲಿರುವ ವಿಚಾರಧಾರೆ-ಗಳನ್ನು ಕಾಣಬಹುದು.

ಹೀಗೆ ಕುವೆಂಪುರವರಲ್ಲಿದ್ದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳ ಧೋರಣೆಗಳನ್ನು ಅವರ ನಾಟಕಗಳಲ್ಲಿ ಕಾಣಬಹುದು. ಕುವೆಂಪುರವರ ನಾಟಕದಲ್ಲಿ ಪುರಾಣಕಥೆಗಳ ಪರಿವರ್ತನೆಗೆ ಹಾಗೂ ಅವನ್ನು ಸರ್ವಕಾಲಿಕ ಶ್ರೇಷ್ಠವನ್ನಾಗಿಸಬೇಕೆಂಬ ಅವರ ಮಹತ್ವಾಕಾಂಕ್ಷೆಯ ಪ್ರಯತ್ನಗಳು, ಅವರ ಸಾಮಾಜಿಕ ಸಮಾನತೆ, ಸ್ತ್ರೀಸ್ವಾತಂತ್ರ್ಯ,

---

೧. ಸುಧಾಕರ – ಕುವೆಂಪು ನಾಟಕ ವಿಹಾರ – ಸಂಪಾದಕರು, ದೇಜಗೌ -- ಭಾಷೆಯ ಭಾಗದಲ್ಲಿ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೭, ಪುಟ. ೧೯

ವರ್ಣಸಮಾನತೆ ಸರ್ವೋದಯತೆ, ರಾಮಕೃಷ್ಣ ಸ್ವಾಮಿವಿವೇಕಾನಂದರ ಪ್ರೇರಣೆ ಶ್ರೀರಾಮಕೃಷ್ಣಾಶ್ರಮದ ಪ್ರಭಾವ ಈ ಮೇಲ್ಕಂಡ ಎಲ್ಲಾ ಅಂಶಗಳು ಕುವೆಂಪುರವರ ಈ ಪುರಾಣ ಕಥೆಗಳ ಬದಲಾವಣೆಗೆ ಕಾರಣವಾಗಿವೆ. ಇಲ್ಲಿ ಯಾವುದೇ ಒಂದು ಅಂಶದ ಮೇಲೆ ಆಧಾರಿತವಾದದ್ದಲ್ಲ. ಕುವೆಂಪುರವರ ಒಂದೇ ನಾಟಕದಲ್ಲಿ ವಿವಿಧ ಬಗೆಯ ದೃಷ್ಟಿಕೋನಗಳು, ವೈವಿಧ್ಯಮಯವಾದ ವೈಚಾರಿಕ ಅಂಶಗಳು, ಸಾಮಾಜಿಕ ಅಂಶಗಳನ್ನು ಕಾಣಬಹುದು. ಈ ಎಲ್ಲಾ ಕಾರಣಗಳಿಂದಾಗಿ ಕುವೆಂಪುರವರು ಮೂಲಪೌರಾಣಿಕ ಕಥೆಗಳನ್ನು ತಮ್ಮ ನಾಟಕದಲ್ಲಿ ಪರಿವರ್ತನೆ ಮಾಡಿದ್ದಾರೆ.

# ಪರಾಮರ್ಶನ ಗ್ರಂಥಗಳು


೧. ಕುವೆಂಪು ನಾಟಕಗಳ ಅಧ್ಯಯನ : ನರಹಳ್ಳಿ ಬಾಲಸುಬ್ರಹ್ಮಣ್ಯ ಅಂಕಿತ ಪುಸ್ತಕದ ೧೧೦ನೇ ಪ್ರಕಟಣೆ, ೨೦೦೨

೨. ಕುವೆಂಪು ಒಂದು ಪುನರನ್ವೇಷಣೆ : ಸಂಪಾದಕರು: ಡಿ.ಎಸ್.ನಾಗಭೂಷಣ ಲೋಹಿಯಾ ಪ್ರಕಾಶನ, ಬಳ್ಳಾರಿ

೩. ಕುವೆಂಪು ಕೃತಿ ವಿಮರ್ಶೆ : ಸಂಪಾದಕರು: ಪ್ರೊ. ಅರವಿಂದ ಮಾಲಗತ್ತಿ

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಣೆ ಮಾಲೆ – ೫೪೪, ಸಾಮಾನ್ಯ ಗ್ರಂಥಮಾಲೆ, ೪೭, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಮೈಸೂರು – ೨೦೦೬.

೪. ಕುವೆಂಪು : ಪುನರ್ಮನನ : ಪ್ರಧಾನ ಸಂಪಾದಕರು

ಪ್ರೊ. ಕೆ.ಭೈರಪ್ಪ
ಪ್ರೊ. ಅರವಿಂದ ಮಾಲಗತ್ತಿ
ಶ್ರೀ ಕುವೆಂಪು ಜನ್ಮ ಶತಮಾನೋತ್ಸವ ವರ್ಷ – ೨೦೦೪.
ಪ್ರಸಾರಂಗ, ಮೈಸೂರು ವಿ.ವಿ.

೫. ಕುವೆಂಪು ನಾಟಕ ವಿಹಾರ : ಪ್ರಧಾನ ಸಂಪಾದಕರು, ದೇ.ಜವರೇಗೌಡ ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೭.

೬. ಕುವೆಂಪು ಅವರ ವೈಚಾರಿಕತೆ : ಡಾ. ಎಚ್.ತಿಪ್ಪೇರುದ್ರಸ್ವಾಮಿ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ೧೯೯೩.

೭. ಕುವೆಂಪು ಕೃತಿಗಳ ಕೈಪಿಡಿ : ಮಂಜುಳಾ ಹುಲ್ಲಹಳ್ಳಿ, ಕುವೆಂಪು ಶತಮಾನೋತ್ಸವ– ೨೦೦೪, ಸಾರ್ವಜನಿಕ ಗ್ರಂಥಾಲಯ ಇಲಾಖೆ

೮. ಕುವೆಂಪು ನಾಟಕ ಸಮೀಕ್ಷೆ : ಸಂಪಾದಕರು: ಮಳಲಿ ವಸಂತಕುಮಾರ್

೯. ರಾಮಾಯಣ ಮಹಾಕಾವ್ಯದ ಉತ್ತರಕಾಂಡ : ವಾಲ್ಮೀಕಿ ಮಹರ್ಷಿಗಳು

೧೦. ಮಹಾಭಾರತ ಮಹಾಕಾವ್ಯ : ವ್ಯಾಸ ಮಹರ್ಷಿಗಳು

೧೧. ಕಾಳಿದಾಸನ ಸೀತಾಪರಿತ್ಯಾಗದ ಸನ್ನಿವೇಶದ ಗ್ರಂಥಭಾಗ


*****

